# ಕರ್ಮ ಪತ್ರ




ರಚಿತ : ತ್ರಿಮತ ಏಕೈಕ ಗುರುವು
ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ
**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

*www.thraithashakam.org*





# ಕರ್ಮ ಪತ್ರ


<u>ರಚಿತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 50/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಶ್ರೀನಿವಾಸ**–09705864675, **ಲಕ್ಷ್ಮಿಣಾರಾಯಣಾಚಾರಿ**–09440556968.
**ವೆಂಕಟೇಶ್**–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ.–38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಂಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

## ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಕರ್ಮ ಪತ್ರ



ಕರ್ಮ ಎನ್ನುವುದು ಪ್ರತ್ಯಕ್ಷವಾಗಿ ತಿಳಿಯುವಂತದಲ್ಲ. ಕರ್ಮ ಮರ್ಮವಾದುದು, ಯಾರಿಗೂ ತಿಳಿಯದು. ಕರ್ಮ ಎನ್ನುವ ಮಾತನ್ನು ಎಲ್ಲರೂ ಅನ್ನುತ್ತಿದ್ದರೂ, ಕೇಳುತ್ತಿದ್ದರೂ ಅದು ಕಾರ್ಯರೂಪದಲ್ಲಿ ನಡೆದಾಗಲೇ, ಕರ್ಮ ಇಂತಹದೆಂದು ಅರ್ಥವಾಗುತ್ತದೆ. ಕಾರ್ಯ ಪ್ರತ್ಯಕ್ಷವಾಗಿ ಎಲ್ಲರಿಗೂ ತಿಳಿಯುವಂತೆ ನಡೆಯುತ್ತಿರುತ್ತದೆ. ಕರ್ಮ ಒಂದು ತಿಳಿಯದ ಭಾವವಾಗಿದ್ದು, ಅದೇ ಕರ್ಮ ಕಾರ್ಯವಾಗಿ ಕಾಣಿಸುತ್ತಿದೆ. ನಂತರ ಅದೇ ಕರ್ಮ ಅನುಭವವು ಸಹಾ ಆಗುತ್ತಿದೆ. ಕಾನೂನು ಸರ್ಕಾರದ್ದಾದರೆ, ಕಾನೂನು ಪರಿಪಾಲನೆರೂಪದಲ್ಲಿ ತಿಳಿಯುತ್ತಿದೆ. ಪಾಲಕರು ಪಾಲನೆಯನ್ನು ಪ್ರಜೆಗಳ ಮೇಲೆ ಜಾರಿ ಮಾಡಿದಾಗ, ಪ್ರಜೆಗಳು ಅದನ್ನು ಅನುಭವಿಸುತ್ತಿದ್ದಾರೆಂದು ಎಲ್ಲರಿಗು ತಿಳಿದಿದೆ. ಹಾಗೆಯೇ ಕರ್ಮವೆಂಬ ಕಾನೂನು, ಶರೀರದಲ್ಲಿ ರಾಜನಾದ ಆತ್ಮದ್ದು. ಕರ್ಮ, ಕಾರ್ಯ ರೂಪದಲ್ಲಿ ತಿಳಿಯುತ್ತಿದೆ. ಶರೀರ ಅವಯವಗಳು ಕಾರ್ಯವನ್ನು ಜಾರಿ ಮಾಡಿದಾಗ, ಜೀವಿಗಳು ಅದನ್ನು ಅನುಭವಿಸುತ್ತಿದ್ದಾರೆಂದು ತಿಳಿಯುತ್ತಿದೆ. ಒಟ್ಟಾರೆ ಸುಖದುಃಖಗಳು ಅನುಭವಗಳಿಂದ ಬರುವಾಗ, ಅನುಭವ ಕಾರ್ಯದಿಂದ, ಕಾರ್ಯ ಕರ್ಮದಿಂದ ಹುಟ್ಟಿಬರುತ್ತಿದೆಯೆಂದು ತಿಳಿಯುತ್ತಿದೆ.

ಸುಖವನ್ನು ಅನುಭವಿಸಿದಾಗ ಅದು ಕೆಲವು ಸೆಕೆಂಡುಗಳ ಕಾಲವೊ, ಕೆಲವು ನಿಮಿಷಗಳ ಕಾಲವೊ ಇರುತ್ತದೆ. ನಂತರ ಸುಖ ಮುಗಿದುಹೋಗುತ್ತದೆ. ಸುಖ ಮುಗಿದುಹೋಗಿದೆಯೆಂದರೆ, ಅದಕ್ಕೆ ಸಂಬಂಧಿಸಿದ ಕಾರ್ಯ ಮುಗಿದಿದೆಯೆಂದು ಅರ್ಥ. ಕಾರ್ಯ ಮುಗಿದಿದೆಯೆಂದರೆ, ಅದಕ್ಕೆ ಸಂಬಂಧಿಸಿದ ಕರ್ಮ ಮುಗಿದುಹೋಗಿದೆಯೆಂದು ಅರ್ಥ. ಸುಖ ಅದಕ್ಕೆ ಸಂಬಂದಿಸಿದ ಕಾರ್ಯ ಮನುಷ್ಯರಿಗೆ ತಿಳಿದು ಮುಗಿದುಹೋಗುತ್ತಿವೆಯಾಗಲಿ, ಅವುಗಳಿಗೆ ಸಂಬಂಧಿಸಿದ ಕರ್ಮ ಮಾತ್ರ ಮುಗಿದರೂ ಕಾಣಿಸುವುದಿಲ್ಲ. ಕರ್ಮ ಎನ್ನುವುದು ನಂಬಿಕೆ ಮಾತ್ರವೆ. ಅದರ ಕಾರ್ಯ ಸತ್ಯ, ಹಾಗೆಯೇ ಅದರ ಅನುಭವವು ಪ್ರತ್ಯಕ್ಷ. ಕರ್ಮದಿಂದ ಕಾರ್ಯ ನಡೆಯುತ್ತಿದೆಯೆಂದು, ಪ್ರತಿ ಕಾರ್ಯಕ್ಕೂ ಮೂಲ ಕರ್ಮವೇ ಎಂದು ತಿಳಿಯುತ್ತಿದೆ. ನಡೆಯುವ ಕಾರ್ಯಕ್ಕೆ ಕಾರಣವಾದ

ಕರ್ಮ ಮನುಷ್ಯನ ತಲೆಯಲ್ಲಿಯೇ ಇದೆ. ನಡೆದುಹೋದ ಕಾರ್ಯಕ್ಕೆ ಕರ್ಮ ಮುಗಿದುಹೋಗಿದೆ. ಕಾರ್ಯ ನಡೆಯುತ್ತಿರುವಾಗ ಕರ್ಮವೂ ಸಹಾ ಮುಗಿದುಹೋಗುತ್ತಿದೆ. ಅರ್ಥ ಮಾಡಿಕೊಂಡರೆ ಕಾರ್ಯವನ್ನನುಸರಿಸಿ ಕರ್ಮ ನಡೆಯಲಿಲ್ಲವೆಂದು, ಕರ್ಮವನ್ನನುಸರಿಸಿ ಕಾರ್ಯ ನಡೆಯುತ್ತಿದೆಯೆಂದು ಜ್ಞಾಪಕ ಇಟ್ಟುಕೊಳ್ಳಬೇಕು. ಮುಂಬರುವ ಕರ್ಮವನ್ನು ಭವಿಷ್ಯತ್ತು ಎನ್ನುತ್ತೇವೆ. ನಡೆದುಹೋದ ಕರ್ಮವನ್ನು ಭೂತ ಅನ್ನುತ್ತೇವೆ. ನಡೆಯುತ್ತಿರುವ ಕರ್ಮವನ್ನು ವರ್ತಮಾನ ಎನ್ನುತ್ತೇವೆ. ಇವುಗಳನ್ನೇ ಮಾತಿನ ವರಸೆಯಲ್ಲಿ ಭೂತ, ಭವಿಷತ್ತು, ವರ್ತಮಾನಗಳೆಂದು ಎನ್ನುತ್ತೇವೆ. ಈ ಮೂರು ಪದಗಳು ಕರ್ಮವೊಂದರ ಸ್ಥಿತಿಗತಿಯನ್ನು ಕುರಿತು ತಿಳಿಸುತ್ತಿವೆ. ವರ್ತಮಾನ ಪ್ರಸ್ತುತ ಅನುಭವದಲ್ಲಿ ಇರುವಾಗ, ಭೂತ ನಡೆದ ಸತ್ಯವಾಗಿದ್ದು, ಭವಿಷ್ಯತ್ತು ಅನುಭವವಲ್ಲ, ನಡೆದ ಸತ್ಯವೂ ಅಲ್ಲ. ಆದರೆ ತಿಳಿಯದ ಅಂಧಕಾರವೇ ಭವಿಷ್ಯತ್ತು. ಅಂತಹ ಅಂಧಕಾರ ಭವಿಷ್ಯತ್ತನ್ನು ಜ್ಞಾನ ಎನ್ನುವ ಜ್ಯೋತಿ ಮೂಲಕ ತಿಳಿಯಬಹುದೆಂದು, ನಮ್ಮ ರಚನೆಯಲ್ಲಿನ **"ಜ್ಯೋತಿಷ್ಯ ಶಾಸ್ತ್ರ"** ಎಂಬ ಗ್ರಂಥದಲ್ಲಿ ಹೇಳಿದ್ದೇವೆ.

ಭವಿಷ್ಯತ್ತು ಅಂಧಕಾರವೆಂದು ಹೇಳಿದಂತೆ, ಕರ್ಮವನ್ನು ಮರ್ಮವೆಂದು ಹೇಳಬಹುದು. ಮರ್ಮ ಎಂದರೆ ತಿಳಿಯದಂತೆ ರಹಸ್ಯವಾಗಿ ಇರುವುದೆಂದು ಅರ್ಥ. ಅಂಧಕಾರವೆಂದರೆ ಕತ್ತಲಿಂದ ಕೂಡಿಕೊಂಡು ಕಣ್ಣಿಗೆ ಕಾಣಿಸದಂತೆ ಇರುವುದೆಂದು ಅರ್ಥ. ಬಾಹ್ಯ ಜ್ಞಾನೇಂದ್ರಿಯವಾದ ಕಣ್ಣಿಗಾಗಲಿ, ಅಂತರೇಂದ್ರಿಯವಾದ ಬುದ್ಧಿಗಾಗಲಿ ತಿಳಿಯದಹಾಗೆ ಇರುವುದೇ ಕರ್ಮ. ಕರ್ಮ ಯಾರಿಗೆ ಮರ್ಮವಾಗಿದೆ ಎಂದು ಪ್ರಶ್ನಿಸಿಕೊಂಡರೆ, ಯಾರಾದರೆ ಕರ್ಮವನ್ನು ಅನುಭವಿಸುತ್ತಿದ್ದಾರೋ ಅವರಿಗೆ ಕರ್ಮ ಮರ್ಮವಾಗಿದೆಯೆಂದು ಹೇಳಬಹುದು. ಕರ್ಮ ಎನ್ನುವ ಪದವನ್ನು ನಾಸ್ತಿಕವಾದಿಗಳು, ಹೇತುವಾದಿಗ ಳೆಂದು ಹೆಸರಿಟ್ಟುಕೊಂಡ ನಾಸ್ತಿಕರು, ಸತ್ಯಾನ್ವೇಷಕರೆಂದು ಹೇಳಿಕೊಳ್ಳುತ್ತಿರುವ ನಾಸ್ತಿಕರು ಒಪ್ಪಿಕೊಳ್ಳುವುದಿಲ್ಲ. ಕೆಲವು ಸಮಾಜದವರೂ ಕರ್ಮವೆಂಬ ಮಾತನ್ನು ನಂಬುವುದಿಲ್ಲ. ಅಂತಹವರು ಕರ್ಮ ಎನ್ನುವುದು ಕೇವಲ ಕಲ್ಪಿತವೆಂದು, ಕರ್ಮ ಎಂಬುವುದು ಜ್ಞಾನಕ್ಕೆ ಸಂಬಂಧಿಸಿರುವುದು ಅಲ್ಲವೇ ಅಲ್ಲವೆಂದು

ವಾದಿಸುತ್ತಾ, ಕರ್ಮವೆಂಬ ಮಾತನ್ನು ಹೇಳುವ ಯೋಗಿಗಳನ್ನು ಜ್ಞಾನಿಗಳನ್ನು ಅವಮಾನಿಸಿ ಮಾತನಾಡುತ್ತಾ, ದೈವಜ್ಞಾನವನ್ನೇ ಅವಹೇಳನ ಮಾಡುತ್ತಿರುತ್ತಾರೆ. ಅಂತಹವರು ಕರ್ಮವನ್ನು ಕುರಿತು ಪ್ರಶ್ನಿಸುವ ಪ್ರತಿ ಪ್ರಶ್ನೆಗು ಉತ್ತರವನ್ನು ಕೊಡಬೇಕೆಂದುಕೊಂಡಿದ್ದೇವೆ. ಆದ್ದರಿಂದ ಕರ್ಮದ್ವೇಷಿಗಳು, ಜ್ಞಾನದೂಷಿಗಳು ಆದವರನ್ನು ಬಿಡದೆ, ಅವರ ಹತ್ತಿರಕ್ಕೆ ನಾವೇ ಹೋಗಿ ಅವರು ಕೇಳಿದ ಪ್ರತಿ ಪ್ರಶ್ನೆಗು ಉತ್ತರ ಕೊಡುವುದಕ್ಕೆ ಪ್ರಯತ್ನಿಸುತ್ತಿದ್ದೇವೆ. ಕಾಣಿಸದ ಕತ್ತಲಾಗಿ, ತಿಳಿಯದ ಮರ್ಮವಾಗಿರುವ ಕರ್ಮವನ್ನು, ಎಲ್ಲರಿಗೂ ತಿಳಿಸುವುದು ನಮ್ಮ ಕರ್ತವ್ಯವಾಗಿ ಭಾವಿಸಿ, ನಾಸ್ತಿಕರು ಕೇಳುವ ಪ್ರಶ್ನೆಗಳಿಗೂ ಉತ್ತರಗಳನ್ನು ಹೇಳುತ್ತಾ ಬಂದಿದ್ದೇವೆ. ಅಲ್ಲಲ್ಲಿ ಅನೇಕ ಸಂದರ್ಭಗಳಲ್ಲಿ ನಾಸ್ತಿಕರು ಕೇಳಿದ ಪ್ರಶ್ನೆಗಳನ್ನು, ನಾವು ಹೇಳಿದ ಉತ್ತರಗಳನ್ನು ಕೆಳಗೆ ಬರೆಯುತ್ತಿದ್ದೇವೆ ನೋಡಿರಿ.

**1) ಪ್ರಶ್ನೆ :- ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದ ಕರ್ಮ, ಬೈಬಲ್‌ನಲ್ಲಿ ಏಸು ಹೇಳಿದ ಪಾಪ, ಖುರ್‌ಆನ್‌ನಲ್ಲಿ ಜಿಬ್ರಯೇಲ್ ಹೇಳಿದ ಕರ್ಮಪತ್ರ ಎನ್ನುವ ಮಾತುಗಳು ಮೂರು ಬೇರೆಬೇರೆ ಭಾವಗಳಿಂದ ಇವೆಯಾ? ಅಥವಾ ಎಲ್ಲಾ ಒಂದೇ ಭಾವಕ್ಕೆ ಸಂಬಂಧಿಸಿರುವ ಮಾತುಗಳಾ?**

**ಉ॥ :-** ಭಗವದ್ಗೀತೆ ಸೃಷ್ಟ್ಯಾದಿಯಲ್ಲಿ ಆಕಾಶವಾಣಿಯಿಂದ ಸೂರ್ಯನಿಗೆ ಹೇಳಲಾದ ಜ್ಞಾನ. ಅದೇ ಜ್ಞಾನವನ್ನೇ ಐದುಸಾವಿರದ ನೂರಐವತ್ತೊಂದು (5151) ವರ್ಷಗಳ ಪೂರ್ವದಲ್ಲಿ ಶ್ರೀಕೃಷ್ಣನು ಭಗವದ್ಗೀತೆಯಾಗಿ, 2013 ವರ್ಷಗಳ ಪೂರ್ವದಲ್ಲಿ ಏಸು ಬೈಬಲಾಗಿ, 1400 ವರ್ಷಗಳ ಪೂರ್ವದಲ್ಲಿ ಜಿಬ್ರಯೇಲ್ ಖುರ್‌ಆನ್‌ನನ್ನು ಹೇಳುವುದು ನಡೆದಿದೆ. ಯಾರು ಹೇಳಿದರೂ ಅದು ಎಲ್ಲವೂ ದೈವಜ್ಞಾನವೇ ಆಗಿರುವುದರಿಂದ, ಪ್ರತ್ಯೇಕಿಸಿ ಸೃಷ್ಟ್ಯಾದಿಯಲ್ಲಿ ಸೂರ್ಯನಿಗೆ ಹೇಳಿದ ಜ್ಞಾನವೇ ಮೂರು ಸಂದರ್ಭಗಳಲ್ಲಿ ಹೇಳಿರುವುದರಿಂದ, ಕರ್ಮ ಎಂದರೂ, ಪಾಪವೆಂದರೂ, ಕರ್ಮ ಪತ್ರವೆಂದರೂ ಎಲ್ಲವೂ ಗೀತೆಯಲ್ಲಿ ಹೇಳಿದ ಕರ್ಮ ಎಂದೇ ತಿಳಿಯಬೇಕು. ಕರ್ಮ ಎನ್ನುವ ಪದ ಒಂದೇ ಆದರೂ, ಅವರ ಭಾಷೆಗಳನ್ನು ಭಾವಗಳನ್ನನುಸರಿಸಿ ಒಂದುಕಡೆ ಕರ್ಮವೆಂದೂ,

ಮತ್ತೊಂದುಕಡೆ ಪಾಪ, ಪುಣ್ಯ ಎಂದೂ, ಮತ್ತೊಂದು ಕಡೆ ಕರ್ಮಪತ್ರ ಎಂದೂ ಹೇಳುತ್ತಿದ್ದಾರೆ. ಕೆಲವು ಸಂದರ್ಭಗಳಲ್ಲಿ ಹೆಸರುಗಳು ಬದಲಾದರು ಉದ್ದೇಶ ಮಾತ್ರ ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದ ಭಾವವೇ ಇರುತ್ತದೆಂದು ತಿಳಿಯಬೇಕು. ಕೆಲವರು ಮನುಷ್ಯರಾಗಲಿ ಅಥವಾ ಇತರ ಮತದವರಾಗಲಿ ಕರ್ಮವನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ತಪ್ಪಾಗಿ ಅರ್ಥೈಸಿಕೊಳ್ಳುವುದು ನಡೆಯುತ್ತಿದೆ. ಅವರ ಮೆದುಳಿನಲ್ಲಿ ತಿಳಿದ ಭಾವದ ಮೇಲೆ ಅವರು ನಿಂತುಹೋಗುವುದು ನಡೆಯುತ್ತಿದೆ. ಅದನ್ನೇ ಅವಗಾಹನೆ ಲೋಪ ಎನ್ನುತ್ತೇವೆ. ಅವಗಾಹನೆ ಸರಿಯಾಗಿ ಇಲ್ಲದಿರುವುದರಿಂದ ಅರ್ಥ ಬದಲಾಗಿ, ಅವರ ಭಾವದಲ್ಲಿ ಬೇರೆ ಅರ್ಥ ನಿಂತುಹೋಗುತ್ತಿದೆ. ದೇವರ ಜ್ಞಾನ ತಿಳಿಯುವುದರಲ್ಲಿ ಒಬ್ಬೊಬ್ಬರಿಗೆ ಒಂದೊಂದು ಅಭಿಪ್ರಾಯ ಬರುವುದು ನಡೆಯುತ್ತಿದೆಯೆಂದರೆ, ಅದು ಮನುಷ್ಯರಲ್ಲಿರುವ ಅವಗಾಹನಾ ಲೋಪದಿಂದ ನಡೆಯುತ್ತಿದೆಯೆಂದು ಹೇಳಬಹುದು.

**2) ಪ್ರಶ್ನೆ :- ಅವಗಾಹನೆ ಲೋಪ ತಿಳುವಳಿಕೆ ಕಡಿಮೆ ಇರುವವರಿಗಿರುತ್ತದೆ ಅಲ್ಲವೆ! ತಿಳುವಳಿಕೆಯುಳ್ಳವರೂ, ಮೇಧಾವಿಗಳೂ, ಉನ್ನತ ಪದವಿಗಳಲ್ಲಿರುವ ವರೂ, ಬಹಳಜನ ದೇವರ ವಿಷಯದಲ್ಲಿ ಪೂರ್ತಿ ವಿರುದ್ಧವಾಗಿದ್ದೂ, ದೇವರೇ ಇಲ್ಲವೆಂದು ಹೇಳುತ್ತಿರುತ್ತಾರೆ. ಮತ್ತು ಸೋಂಬೇರಿಗಳು ದೇವರೆಂದು, ಜ್ಞಾನವೆಂದು ಕೆಲಸಕಾರ್ಯ ಇಲ್ಲದಂತೆ ವ್ಯರ್ಥವಾಗಿ ಕಾಲ ಕಳೆಯುತ್ತಿದ್ದಾರೆಂದು ದೂಷಿಸುತ್ತಿರುತ್ತಾರೆ. ಇಲ್ಲಿ ಎಲ್ಲರೂ ತಿಳುವಳಿಕೆಯುಳ್ಳವರೆ ಅಲ್ಲವೆ ದೇವರು ಇಲ್ಲವೆಂದು ಅನ್ನುತ್ತಿದ್ದಾರೆ. ಇನ್ನೂ ಕೆಲವುಕಡೆ ಹಾಗಲ್ಲ ಹೀಗೆ ಇದ್ದಾನೆಂದು ಕೆಲವರು ಅನ್ನುತ್ತಿರುವಾಗ, ಒಟ್ಟಾರೆ ನಮ್ಮ ಮತದಲ್ಲಿ ಹೊರತು ಇತರ ಮತಗಳಲ್ಲಿರುವುದು ಜ್ಞಾನವಲ್ಲ, ದೇವರೂ ಅಲ್ಲ ಎಂದು ಕೆಲವರು ಹೇಳುತ್ತಿದ್ದಾರೆ. ಇವರೆಲ್ಲರಿಗು ದೇವರ ವಿಷಯದಲ್ಲಿ ಏಕಾಭಿಪ್ರಾಯ ಏಕೆ ಇಲ್ಲ. ಇವರೆಲ್ಲರಿಗೂ ಅವಗಾಹನೆ ಲೋಪವಿದೆಯೆನ್ನುತ್ತೀರಾ?**

**ಉ॥ :–** ಅವಗಾಹನಾ ಲೋಪ ಎನ್ನುವುದು ಒಂದು ವ್ಯಾಧಿಯಂತಹದ್ದು. ಒಂದು ವ್ಯಾಧಿ ಇವನು ತಿಳುವಳಿಕೆಯುಳ್ಳವನು, ಇವನು ತಿಳುವಳಿಕೆ ಇಲ್ಲದವನೆಂದು ನೋಡದಂತೆ, ತನಗಿಷ್ಟಬಂದವರಿಗೆಲ್ಲಾ ಹೇಗಾದರೆ ವ್ಯಾಪಿಸುತ್ತದೋ, ಹಾಗೆ ಅವಗಾಹನೆ ಲೋಪ ಅನ್ನುವುದು ತಿಳುವಳಿಕೆ ಇಲ್ಲದವರಿಗೇ ಅಲ್ಲದೆ, ತಿಳುವಳಿಕೆಯುಳ್ಳ ಮೇಧಾವಿಗಳಿಗು ಸಹಾ ರೋಗದಂತೆ ಆಕ್ರಮಿಸಿರುತ್ತದೆ. ಪ್ರತ್ಯೇಕಿಸಿ ದೇವರ ವಿಷಯದಲ್ಲಿ ಮಾತ್ರ ಅವಗಾಹನೆ ಲೋಪ ಯಾರಲ್ಲಾದರೂ, ಎಂತಹ ದೊಡ್ಡವರಲ್ಲಾದರೂ, ಧನಿಕರಲ್ಲಾದರೂ, ಬಡವರಲ್ಲಾದರೂ, ಅವಿವೇಕವಂತರಲ್ಲಾದರೂ, ವಿವೇಕವಂತರಲ್ಲಾದರೂ, ಪಂಡಿತರಲ್ಲಾದರೂ, ಓದು ಬಾರದ ಪಾಮರರಲ್ಲಾದರೂ ಇರಬಹುದು. ಕೆಲವುಕಡೆ ಜ್ಞಾನಿಗಳಲ್ಲಿ, ಅಜ್ಞಾನಿಗಳಲ್ಲಿ, ಮತ್ತೆಕೆಲವು ಕಡೆ ಜ್ಞಾನವನ್ನು ಬೋಧಿಸುವವರಲ್ಲಿ ಸಹಾ ಅವಗಾಹನೆ ಲೋಪ ಏರ್ಪಡಬಹುದು. ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ ಅವಗಾಹನೆ ಲೋಪ ಎಲ್ಲಾ ವಿಷಯಗಳಲ್ಲಿಯೂ, ಎಲ್ಲಾ ಸಂದರ್ಭಗಳಲ್ಲಿಯೂ ಅಲ್ಲದೆ, ಕೆಲವು ವಿಷಯಗಳಲ್ಲಿ, ಕೆಲವು ಸಂದರ್ಭಗಳಲ್ಲಿ ಮಾತ್ರ ಏರ್ಪಡುತ್ತಿರುತ್ತದೆ. ಒಂದು ವಿಷಯವನ್ನು ನೂರುಜನ ಒಂದೇಸಲ ಕೇಳಿದಾಗ, ಎಲ್ಲರಿಗೂ ಒಂದೇ ಭಾವದಿಂದ ಅರ್ಥವಾಗದಿರುವುದರಿಂದ, ಕೇಳಿದ ಒಂದೇ ವಿಷಯದ ಮೇಲೆ ಕೆಲವರು ಬೇರೆಬೇರೆ ಅಭಿಪ್ರಾಯಗಳನ್ನು ಹೊಂದಿರುತ್ತಾರೆ. ನೂರು ಜನರಲ್ಲಿ ಯಾರದು ಸರಿಯಾದ ಅಭಿಪ್ರಾಯವೊ, ಯಾರಿಗೆ ಸರಿಯಾಗಿ ಅರ್ಥವಾಗಿದೆಯೊ, ಅಲ್ಲಿ ನೂರು ಜನರಿಗೆ ಹೇಳಿದವನಿಗೆ ತಿಳಿಯಬೇಕೇ ಹೊರತು, ಉಳಿದವರಿಗೆ ತಿಳಿಯುವುದಕ್ಕೆ ಅವಕಾಶವಿಲ್ಲ. ಹೇಳಿದವನು ಯಾವ ಅಭಿಪ್ರಾಯದಿಂದ ಹೇಳಿದ್ದಾನೋ, ಕೇಳಿದವರಿಗೆ ಯಾವ ಅಭಿಪ್ರಾಯದಲ್ಲಿ ಅರ್ಥವಾಗಿದೆಯೊ, ಹೇಳಿದವನಿಗೆ ಮಾತ್ರ ಯಾರಲ್ಲಿ ಅವಗಾಹನೆ ಲೋಪ ಏರ್ಪಟ್ಟಿದೆಯೊ ಖಚಿತವಾಗಿ ತಿಳಿಯುತ್ತದೆ. ಏಕೆಂದರೆ! ಹೇಳಲಾಗಿರುವುದು ಏನೊ, ಹೇಳಿದವನಿಗೆ ಮಾತ್ರವೆ ತಿಳಿಯುತ್ತದೆ. ಆದ ಕಾರಣ ಕೇಳಿದವರಲ್ಲಿನ ಭಾವ ಸರಿಯಾದುದೊ, ಅಲ್ಲವೊ ಹೇಳಿದವನಿಗೆ ಮಾತ್ರ ತಿಳಿಯುತ್ತದೆಂಬುದು ಸೂತ್ರ.

**3) ಪ್ರಶ್ನೆ :– ನನಗೆ ತಿಳಿಯದೆ ಕೇಳುತ್ತಿದ್ದೇನೆ. ಅವಗಾಹನೆ ಎಂದರೆ ಏನು?**

**ಉ॥ :–** ಹೇಳಿದವನು ಯಾವ ಉದ್ದೇಶದಿಂದ ಹೇಳುತ್ತಿದ್ದಾನೊ, ಅದೇ ಉದ್ದೇಶವನ್ನು ಸರಿಯಾಗಿ ಗ್ರಹಿಸಿಕೊಳ್ಳುವುದನ್ನು ಅವಗಾಹನೆ ಅನ್ನುತ್ತೇವೆ. ಹೇಳಿದವನ ಭಾವ, ಕೇಳಿದವನು ತಿಳಿದುಕೊಂಡ ಭಾವ ಎರಡೂ ಸಮಾನವಾಗಿ ಇರುವಾಗ ಅದನ್ನು ಸರಿಯಾಗಿ ಗ್ರಹಿಸಿಕೊಳ್ಳುವುದು ಎನ್ನುತ್ತೇವೆ. ಸರಿ ಎಂದರೂ, ಸಮಾನ ಎಂದರೂ ಎರಡೂ ಒಂದೇ ಅರ್ಥ. ಎರಡುಕಡೆ ಸಮಾನ ಭಾವ ಇರುವಾಗ ಸರಿಸಮಾನ ಎಂದು ಅನ್ನುವುದು ಸಹಾ ನಡೆಯುತ್ತಿದೆ. ಒಂದುಕಡೆ ಭಾವವನ್ನು ಸರಿ ಎಂದು ಮತ್ತೊಂದುಕಡೆ ಭಾವವನ್ನು ಮೊದಲನೆಯದರೊಂದಿಗೆ ಹೋಲಿಸಿ ನೋಡಿ ಅದಕ್ಕೆ ಸಮಾನವಾಗಿರುವಾಗ, ಸರಿಸಮಾನ ಎನ್ನುವ ಮಾತನ್ನುಉಪಯೋಗಿಸುವುದು ನಡೆಯುತ್ತಿದೆ. ಯಾವಾಗಾದರೆ ಹೇಳುವವನಿಗೆ (ಮೊದಲನೆಯವನಿಗೆ) ಕೇಳುವವನಿಗೆ (ಎರಡನೆಯವನಿಗೆ) ವ್ಯತ್ಯಾಸ ಬಂದರೆ ಅದನ್ನು ಸರಿಸಮಾನವಲ್ಲ ಎನ್ನುತ್ತೇವೆ. ಇನ್ನೂ ವಿವರವಾಗಿ ಹೇಳಿಕೊಂಡರೆ, ಮೊದಲು ಹೇಳುವವನು ಒಂದು ವಿಷಯವನ್ನು ಅವನ ಭಾವದಲ್ಲಿ ಅವನಿಗೆ ತಿಳಿದಿರುವುದನ್ನು ತಿಳಿದಂತೆ ನೂರಕ್ಕೆ ನೂರರಷ್ಟು ಬೋಧಿಸಿದ್ದಾನೆಂದುಕೊಳ್ಳೋಣ. ಬೋಧನೆಯೆಲ್ಲವೂ ಮಾತುಗಳ ರೂಪದಲ್ಲಾಗಲಿ, ಬರಹರೂಪದಲ್ಲಾಗಲಿ ಇರುತ್ತದೆ. ಒಬ್ಬ ವ್ಯಕ್ತಿ ತನಗೆ ತಿಳಿದಿರುವುದನ್ನು ತಿಳಿದಂತೆ ಹೇಳುವುದೂ, ಇರುವುದನ್ನು ಇದ್ದಂತೆ ಬರೆಯುವುದೂ ನೂರಕ್ಕೆ ನೂರರಷ್ಟು ಪ್ರಕಟಿಸುವುದು ಎನ್ನುತ್ತೇವೆ. ತನಗೆ ತಿಳಿದಿರುವುದು ಯಾವ ರೂಪದಲ್ಲಿ ವ್ಯಕ್ತ ಮಾಡಿದರೂ, ಅದನ್ನು ನೂರಕ್ಕೆ ನೂರರಷ್ಟು ಹೇಳಬಹುದು. ಮಾತುಗಳ ರೂಪದಲ್ಲಿ ಹೇಳಲಾದ ವಿಷಯವನ್ನಾಗಲಿ, ಬರಹಗಳ ರೂಪದಲ್ಲಿ ಬರೆಯಲಾದ ವಿಷಯವನ್ನಾಗಲಿ, ಕೇಳಿದವರು ಅಥವಾ ಓದಿದವರು ಎಷ್ಟು ಪಾಲು ಗ್ರಹಿಸಿದ್ದಾರೊ ಅಷ್ಟು ಆತನ ಅವಗಾಹನೆ ಇದೆಯೆಂದು ಹೇಳಬಹುದು. ಯಾವ ವಿಷಯವನ್ನಾದರೂ, ನೂರಕ್ಕೆ ನೂರರಷ್ಟು ಗ್ರಹಿಸುವವರು ಬಹಳ ಅಪರೂಪವಾಗಿರುತ್ತಾರೆ. ಕೇಳಿರುವುದನ್ನಾಗಲಿ, ಓದಿರುವುದನ್ನಾಗಲಿ ಯಾರಾದರೂ ನೂರಕ್ಕೆ ನೂರರಷ್ಟು

ಗ್ರಹಿಸಿಕೊಳ್ಳಲಾರರು. ಅವರವರ ಗ್ರಾಹಿತಶಕ್ತಿಯನ್ನನುಸರಿಸಿ ಕೆಲವರು 90 ರಷ್ಟು, ಕೆಲವರು 80 ರಷ್ಟು, ಕೆಲವರು 70 ರಷ್ಟು, ಮೊದಲಾದ ಸ್ಥಾನಗಳಲ್ಲಿ ಗ್ರಹಿಸಿಕೊಳ್ಳುತ್ತಿರುತ್ತಾರೆ. 99 ಪಾಲಿನಿಂದ 9 ರಷ್ಟು ಗ್ರಹಿಸಿಕೊಳ್ಳುವವರಿದ್ದಾರೆಂದರೆ ಆಶ್ಚರ್ಯಪಡಬೇಕಾದ ಕೆಲಸವಿಲ್ಲ. ನೂರಕ್ಕೆ ನೂರರಷ್ಟು ಗ್ರಹಿಸಿಕೊಳ್ಳುವವರು ಬಹಳ ಅಪರೂಪವಾಗಿ ಇರುತ್ತಾರೆಂದು ಮೊದಲೆ ಹೇಳಿಕೊಂಡಿದ್ದೇವೆ. ಕೆಲವು ವಿಷಯಗಳನ್ನಾದರೆ ಒಬ್ಬರು ಸಹಾ ಸಕ್ರಮವಾಗಿ ಗ್ರಹಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲದಂತಿರುತ್ತದೆ. ಕೆಲವು ಮಾತುಗಳು ಪೂರ್ತಿ ದ್ವಂದ್ವಾರ್ಥಗಳಿಂದ ಕೂಡಿಕೊಂಡಿರುತ್ತದೆ. ಉದಾಹರಣೆಗೆ ಚಿತ್ರ, ಚೆಪ್ಪಲಿ, ಕಣ್ಣು, ಈ ಮೂರು ಪದಗಳು ಒಂದೇ ಅರ್ಥವನ್ನು ಸೂಚಿಸದೆ ಎರಡು ಅರ್ಥಗಳನ್ನು ಸೂಚಿಸುವುದರಿಂದ, ಇವುಗಳನ್ನು ಓದಿದಾಗ ಸಂದರ್ಭ ವನ್ನನುಸರಿಸಿ ಅರ್ಥ ಮಾಡಿಕೊಳ್ಳಬೇಕಾಗಿರುತ್ತದೆ. ಹಾಗಲ್ಲದಿದ್ದರೆ ಪೂರ್ತಿಯಾಗಿ ಬೇರೆ ಅರ್ಥ ಮಾಡಿಕೊಳ್ಳುವುದು ನಡೆಯುತ್ತಿರುತ್ತದೆ.

ಆಗತಾನೆ ಊರಿನಿಂದ ಬಂದಿರುವ ವ್ಯಕ್ತಿಯನ್ನು ನೋಡಿ ಚೆನ್ನಾಗಿದ್ದೀಯಾ ಎಂದು ಕೇಳಿ ನೀವು ಏಕೆ ಬಂದಿದ್ದೀರಾ? ಎಂದು ಕೇಳಿದ್ದೇವೆಂದುಕೊಳ್ಳಿ, ಆಗ ಆ ವ್ಯಕ್ತಿ ತಾನು ಪ್ರಯಾಣಿಸಿದ ವಾಹನವನ್ನು ಕುರಿತು ಕೇಳುತ್ತಿದ್ದಾನೆಂದು ತಿಳಿದು, ಟ್ರೈನ್ ಮಿಸ್ ಆಗಿದೆ ಆದ್ದರಿಂದ ಬಸ್ಸಿಗೆ ಬಂದಿದ್ದೇನೆಂದು ಹೇಳಿದ್ದಾನೆ, ಆಗ ಕೇಳಿದ ವ್ಯಕ್ತಿ ಅದು ಅಲ್ಲರೀ, ಯಾವ ಕೆಲಸಕ್ಕೋಸ್ಕರ ಬಂದಿದ್ದೀರೆಂದು ಕೇಳಿದ್ದೇನೆಂದು ಹೇಳಿದ್ದಾನೆಂದುಕೊಳ್ಳಿ, ಆಗ ಮೊದಲು ಕೇಳಿರುವ ಪ್ರಶ್ನೆ ಬೇರೆ, ಆತನು ಹೇಳಿದ ಉತ್ತರ ಬೇರೆಯೆಂದು ಯಾರಿಗಾದರೂ ಅರ್ಥವಾಗಿಹೋಗುತ್ತದೆ. ಹಾಗೆ ಚಿತ್ರ ಎನ್ನುವ ಮಾತಿಗೆ ಆಶ್ಚರ್ಯ ಎಂದು ಅರ್ಥ ಮಾಡಿಕೊಳ್ಳಬಹುದು ಅಥವಾ ಬೊಂಬೆ ಎಂದಾಗಲಿ ಸಿನಿಮಾ ಎಂದಾಗಲಿ ಅರ್ಥಮಾಡಿಕೊಳ್ಳಬಹುದು. ಹೇಳು ಎಂದು ಅಂದಾಗ ಸಂಖ್ಯೆಯಲ್ಲಿನ 7 ಎಂದುಕೊಂಡು ಆ ಮಾತನ್ನು ಅರ್ಥ ಮಾಡಿಕೊಳ್ಳಬಹುದು ಅಥವಾ ಸಮಾಧಾನವನ್ನು ಹೇಳು ಎಂದು ಕೇಳುತ್ತಿದ್ದಾನೆಂದು ಅಂದುಕೊಳ್ಳ

ಬಹುದು. ಅದೇ ವಿಧವಾಗಿ ಕಾಲು ಎಂದಾಗ ಅಳತೆ ಪ್ರಮಾಣದ ಕಾಲು ಭಾಗ ಎಂದು ಅಂದುಕೊಳ್ಳಬಹುದು ಅಥವಾ ಶರೀರದಲ್ಲಿನ ಕಾಲು ಅಂದುಕೊಳ್ಳ ಬಹುದು. ಹೀಗೆ ಅನೇಕ ಸಂದರ್ಭಗಳಲ್ಲಿ ಇರುವ ಭಾವವನ್ನು ಬಿಟ್ಟು ಪಕ್ಕದ ಭಾವದೊಳಗೆ ಹೋಗುವ ಅವಕಾಶ ಇದೆ. ಒಂದುವೇಳೆ ಮಾತುಗಳ ಸಂದರ್ಭದಲ್ಲಿ ಆದರೆ ಕೂಡಲೇ ತಪ್ಪನ್ನು ಗುರುತಿಸಿಕೊಳ್ಳಬಹುದಾಗಲಿ, ಬರಹ ರೂಪದಲ್ಲಿರುವುದನ್ನು ತಕ್ಷಣ ತಪ್ಪನ್ನು ಗುರುತಿಸಿಕೊಳ್ಳಲಾರೆವು. ಉದಾಹರಣೆಗೆ ಒಂದು ವಾಕ್ಯವನ್ನು ತೆಗೆದುಕೊಂಡು ನೋಡೋಣ. “ಆ ಸಮಯಕ್ಕೆ ಕಲ್ಲು ಅಥವಾ ಕೈಗೆ ಸಿಕ್ಕ ಕೋಲನ್ನು ತೆಗೆದುಕೊಂಡು ಹೊಡೆದೆನು” ಎಂದು ಬರೆಯಲಾದ ವಿಷಯವನ್ನು ನೋಡಿ, ಆ ಸಮಯದಲ್ಲಿ ದೃಷ್ಠಿ ಇಲ್ಲದಿರುದರಿಂದ ಕೈಗೆ ದೊರೆತ ಕೋಲನ್ನು ತೆಗೆದುಕೊಂಡಿದ್ದಾನೇನೊ” ಎಂದು ಅಂದುಕೊಳ್ಳ ಬಹುದು. ಆದರೆ ಅಲ್ಲಿರುವ ಉದ್ದೇಶ ಕಲ್ಲು ಸಿಗದಿರುವುದರಿಂದ ಕೈಗೆ ದೊರೆತ ಕೋಲಿನಿಂದ ಹೊಡೆದಿದ್ದೇನೆಂದು ಅರ್ಥ. ಈ ವಿಧವಾಗಿ ಎಷ್ಟೋ ಸಂದರ್ಭಗಳಲ್ಲಿ ಇರುವ ವಿಷಯವನ್ನು ಸರಿಯಾಗಿ ಗ್ರಹಿಸಿಕೊಂಡಿಲ್ಲ ಎಂದು ತಿಳಿಯುತ್ತದೆ. ಒಂದು ವಿಷಯವನ್ನು ಗ್ರಹಿಸಿಕೊಳ್ಳುವುದರಲ್ಲಿ ಬುದ್ಧಿಗಿರುವ ಶಕ್ತಿಯನ್ನು ಗ್ರಾಹಿತಶಕ್ತಿ ಅಥವಾ ಅವಗಾಹನಾಶಕ್ತಿ ಅನ್ನುತ್ತೇವೆ. ಅದನ್ನೇ ಅವಗಾಹನೆ ಎಂದು ಸಹಾ ಅನ್ನುತ್ತೇವೆ.

**4) ಪ್ರಶ್ನೆ:- ಕೆಲವರು ಒಂದು ಗ್ರಂಥವನ್ನು ಒಂದುಸಲ ಓದಿದಷ್ಟುಮಾತ್ರಕ್ಕೆ ಆ ಗ್ರಂಥದಲ್ಲಿ ಯಾವ ವಿಷಯ ಯಾವ ಪೇಜಿನಲ್ಲಿರುವುದು ಹೇಳುತ್ತಾರೆ. ಹಾಗೆ ಯಾವ ಅಧ್ಯಾಯದಲ್ಲಿ ಯಾವ ಶ್ಲೋಕವಿರುವುದು ಹೇಳುತ್ತಾರೆ. ಯಾವ ಶ್ಲೋಕವಾದರೂ ಒಂದುಸಲ ಓದಿದಷ್ಟುಮಾತ್ರಕ್ಕೆ ಒಂದು ಅಕ್ಷರ ಸಹಾ ತಪ್ಪಾಗದಂತೆ ಯಾವಾಗಾದರೂ ಹೇಳುತ್ತಾರೆ. ಒಂದುಸಲ ಕೇಳಿರುವುದನ್ನಾಗಲಿ, ಒಂದುಸಲ ಓದಿರುವುದನ್ನಾಗಲಿ, ಸಂಪೂರ್ಣವಾಗಿ ಗ್ರಹಿಸಿಕೊಳ್ಳು ವವರನ್ನು” ಏಕಸಂತಾ ಗ್ರಾಹರು” ಎಂದು ಅನ್ನುತ್ತಾರೆ. ಏಕಸಂತಾಗ್ರಾಹರು ಎಂದರೆ ಒಂದುಸಲ ಕೇಳಿದರೂ, ಓದಿದರೂ ಗ್ರಹಿಸಿಕೊಂಡು ತಮ್ಮಲ್ಲಿ ಬಚ್ಚಿಟ್ಟುಕೊಳ್ಳುವ ವರೆಂದು ಅರ್ಥ. ಅಂತಹವರು**

**ಎಷ್ಟೋಜನ ಇದ್ದಾರೆ. ಅಂತಹವರೆಲ್ಲರು ಕೇಳಿರುವುದನ್ನಾಗಲಿ, ಓದಿರುವುದನ್ನಾಗಲಿ ನೂರಕ್ಕೆ ನೂರರಷ್ಟು ಗ್ರಹಿಸಿಕೊಂಡಂತೆ ಅಲ್ಲವೆ!**

**ಉ॥ :–** ಒಂದುಸಲ ಓದಿದಷ್ಟು ಮಾತ್ರವಾಗಲಿ, ಕೇಳಿದಷ್ಟು ಮಾತ್ರವಾಗಲಿ, ಗ್ರಹಿಸಿಕೊಳ್ಳುವವರಿರುವುದು ಸಹಜವೆ. ಅದು ಅವರ ದೊಡ್ಡತನವೆ ಆದರೂ, ಅದು ಸ್ಥೂಲ ಗ್ರಾಹಿತವೇಯಾಗಲಿ ಸೂಕ್ಷ್ಮಗ್ರಾಹಿತವು ಅಲ್ಲ. ಓದಿದ ಓದನ್ನು, ಕೇಳಿದ ಭಾಷೆಯನ್ನು ಸ್ಥೂಲವಾಗಿ ಗ್ರಹಿಸಿಕೊಂಡು ಅದನ್ನು ತಮ್ಮ ಜ್ಞಾಪಕದಲ್ಲಿ ಇಟ್ಟುಕೊಂಡು ಪುನಃ ಹೇಳುವವರು ಇದ್ದಾರೆಂಬುವುದು ವಾಸ್ತವವೆ. ಒಂದುಸಲ ಕೇಳಿದ್ದನ್ನೇ ಅಥವಾ ನೋಡಿದ್ದನ್ನೇ ಪುನಃ ಹೇಳುವವರು ಇದ್ದಾರೆ. ಅಷ್ಟುಮಾತ್ರಕ್ಕೆ ಅವರನ್ನು ಗ್ರಾಹಿತಶಕ್ತಿ ಇರುವವರೆಂದುಕೊಳ್ಳುವುದು ತಪ್ಪಾಗುತ್ತದೆ ಏಕೆಂದರೆ! ಅವರಿಗಿರುವುದು ಜ್ಞಾಪಕಶಕ್ತಿಯೇ ಆಗಲಿ, ಜ್ಞಾನಶಕ್ತಿ ಅಲ್ಲವೆಂದು ತಿಳಿಯುತ್ತಿದೆ. ಒಂದು ವಿಷಯವನ್ನು ಕೇಳಿದರೂ, ಓದಿದರೂ ಪುನಃ ಅದನ್ನು ನೂರಕ್ಕೆ ನೂರರಷ್ಟು ಪದಕ್ಕೆ ಪದ ಹೇಗಿರುವುದು ಹಾಗೆ ಹೇಳಿದರೆ, ಅದನ್ನು ಸರಿಯಾದ ಗ್ರಾಹಿತಶಕ್ತಿ ಅಲ್ಲವೆಂದು ಹೇಳಬಹುದು. ಸ್ಥೂಲವಾಗಿರುವ ವಿಷಯವನ್ನು ಪದಕ್ಕೆ ಪದ ನೂರರಷ್ಟು ಹೇಳಿದರೂ, ಸೂಕ್ಷ್ಮವಾಗಿರುವ ಭಾವಕ್ಕೆ ಸ್ವಲ್ಪವೂ ಸರಿಸಮಾನ ಅಲ್ಲವೆಂದು ತಿಳಿಯಬೇಕು ಅಂತಹವರು ಭಾಷೆಯ ಮೇಲೆಯೇ ಆಧಾರ ಪಟ್ಟಿರುತ್ತಾರಾಗಲಿ, ಭಾವದ ಮೇಲೆ ಆಧಾರಪಟ್ಟಿರುವುದಿಲ್ಲ. ಯಾವುದರಲ್ಲಾದರು ಭಾಷೆ ಮುಖ್ಯವಲ್ಲ ಭಾವ ಮುಖ್ಯ. ಭಾವವಿಲ್ಲದ ಭಾಷೆಯನ್ನು ಅಥವಾ ವಿದ್ಯೆಯನ್ನು ಎಷ್ಟಾಗಿ ಪ್ರದರ್ಶಿಸಿದರೂ ಅದು ಅಲಂಕಾರದಾಯಕವೆಯಾಗಲಿ, ಆನಂದದಾಯಕವಲ್ಲ. ಭಾವವಿಲ್ಲದ ಅವಗಾಹನೆ ಪ್ರಾಣವಿಲ್ಲದ ಶರೀರವಂತಹದ್ದು. ಸರ್ವಸಾಧಾರಣವಾಗಿ ಪ್ರಪಂಚ ವಿಷಯಗಳಲ್ಲಿಯೆ ಭಾವದಲ್ಲಿ ತಪ್ಪಾಗಿ ಅರ್ಥೈಸಿಕೊಂಡವರು ಪರಮಾತ್ಮ ಜ್ಞಾನ ವಿಷಯಗಳಲ್ಲಿ ಪೂರ್ತಿ ತಪ್ಪಾಗಿ ಅರ್ಥೈಸಿಕೊಳ್ಳುವುದಕ್ಕೆ ಅವಕಾಶವಿದೆ. ಆದ್ದರಿಂದ ಎಷ್ಟು ಗ್ರಾಹಿತಶಕ್ತಿ ಇರುವವರಿಗಾದರೂ ದೇವರ ಜ್ಞಾನದಲ್ಲಿನ ಸೂಕ್ಷ್ಮತೆಯನ್ನು ಅರ್ಥಮಾಡಿಕೊಳ್ಳದೆ, ತಮಗೆ ಅರ್ಥವಾಗಲಿಲ್ಲ ಎಂಬ ವಿಷಯವು ಸಹಾ ತಿಳಿಯದಂತೆ ಹೋಗಿ, ಎಲ್ಲಾ ಅರ್ಥವಾಗಿದೆಯೆಂಬ ನಂಬಿಕೆಯಿಂದಿದ್ದಾರೆ.

**5) ಪ್ರಶ್ನೆ :– ಕರ್ಮ ವಿಷಯ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಮುಖ್ಯವಾದ ಸಮಾಚಾರ ವಾದ್ದರಿಂದ, ಗ್ರಂಥಗಳಲ್ಲಿನ ಜ್ಞಾನವನ್ನು ಕಂಠಾಪಾಠವಾಗಿ ಹೇಳುವವರಿಗೆ ಸಹಾ ಕರ್ಮದಲ್ಲಿನ ಸೂಕ್ಷ್ಮತೆ ಸರಿಯಾಗಿ ಅರ್ಥ ವಾಗಲಿಲ್ಲವೆಂದೇ ಹೇಳಬಹುದಾ?**

**ಉ॥ :–** ದೇವರ ಶಾಸ್ತ್ರವಾದುದನ್ನು ದೊಡ್ಡ ವಿದ್ಯಾಶಾಸ್ತ್ರ ಅನ್ನುತ್ತಿದ್ದೇವೆ. ಎಲ್ಲದಕ್ಕಿಂತ ಮೊದಲು ಹುಟ್ಟಿದರೂ, ಎಲ್ಲದಕ್ಕಿಂತ ಕೊನೆಯಲ್ಲಿರುವುದೇ ದೇವರ ಜ್ಞಾನ. ಅದನ್ನೆ ಬ್ರಹ್ಮವಿದ್ಯಾ (ದೊಡ್ಡ ವಿದ್ಯಾ) ಶಾಸ್ತ್ರವೆಂದು ಕರೆಯಲಾಗಿದೆ. ದೇವರು ಕಾಣಿಸದ ಸೂಕ್ಷ್ಮವಾದವನು. ಹಾಗೆಯೇ ದೇವರ ಜ್ಞಾನವೆಲ್ಲವೂ ಸೂಕ್ಷ್ಮ ಭಾವಗಳಿಂದ ತುಂಬಿರುತ್ತದೆ. ಸ್ಥೂಲವಾಗಿರುವ ಶ್ಲೋಕಗಳಲ್ಲಾಗಲಿ, ಹಾಡಿನಲ್ಲಾ ಗಲಿ, ಪದ್ಯದಲ್ಲಾಗಲಿ, ಗದ್ಯದಲ್ಲಾಗಲಿ, ಸೂಕ್ಷ್ಮತೆಯನ್ನು ಗ್ರಹಿಸಿಕೊಳ್ಳದವರು ದೇವರ ಜ್ಞಾನದಲ್ಲಿನ ಸತ್ಯವನ್ನು ತಿಳಿಯಲಾರರು. ದೇವರ ಜ್ಞಾನದಲ್ಲಿ ಕರ್ಮ ಮುಖ್ಯಸ್ಥಾನವನ್ನು ಆಕ್ರಮಿಸಿದೆ. ಕರ್ಮ ದೇವರ ಜ್ಞಾನದಲ್ಲಿ ಭಾಗವಾಗಿರುವು ದರಿಂದ, ಕರ್ಮ ಸೂಕ್ಷ್ಮವಾಗಿದ್ದು ಯಾರಿಗೂ ತಿಳಿಯದಿರುವು ದಾಗಿದೆ. ಅಂತಹ ಸೂಕ್ಷ್ಮದಿಂದ ಕೂಡಿಕೊಂಡ ಕರ್ಮವನ್ನು ಸ್ಥೂಲವಾಗಿ ಜ್ಞಾಪಕಶಕ್ತಿ ಇರುವವರು ತಿಳಿಯಲಾರರು. ಕರ್ಮವನ್ನು ತಿಳಿಯುವುದಕ್ಕೆ ಸೂಕ್ಷ್ಮಗ್ರಾಹಿತಶಕ್ತಿ ಅಗತ್ಯ. ಜ್ಞಾಪಕಶಕ್ತಿ ಮನೋಬಲದಿಂದ ಕೂಡಿಕೊಂಡಿದೆ. ಮನೋಬಲ ಮಾಯಯಂತ ಹದ್ದು. ನಾನು ಚೆನ್ನಾಗಿ ತಿಳಿದಿರುವವನೆಂಬ ಗರ್ವವನ್ನು ಉಂಟುಮಾಡುವು ದರಿಂದ, ತನಗಿರುವ ಜ್ಞಾಪಕಶಕ್ತಿ ಉಳಿದವರಿಗೆ ಇಲ್ಲವೆಂಬ ಭಾವವು ಗುಣಗಳಲ್ಲಿ ಗರ್ವಕ್ಕೆ ಸಂಬಂಧಿಸಿರುವುದಾದ್ದರಿಂದ, ಜ್ಞಾಪಕಶಕ್ತಿ ಸಹಾ ಮಾಯೆಗೆ ಬಲಕೊಡುತ್ತಿದೆ. ಆದ್ದರಿಂದ ದೈವ ಸಂಬಂಧವಾದ ಕರ್ಮವನ್ನು ಗ್ರಹಿಸುವುದಕ್ಕೆ ಸೂಕ್ಷ್ಮ ದೃಷ್ಠಿ ಇಲ್ಲದಂತೆ ಹೋಗುತ್ತಿದೆ. ಎಂತಹ ಜ್ಞಾಪಕಶಕ್ತಿ ಇರುವವರಿಗಾ ದಾದರೂ ಸೂಕ್ಷ್ಮದಿಂದ ಕೂಡಿಕೊಂಡ ದೈವಜ್ಞಾನ ಅವಗಾಹನೆಗೆ ಬರುತ್ತದೆಂಬ ನಂಬಿಕೆ ಇಲ್ಲ.

**6) ಪ್ರಶ್ನೆ :– ಜ್ಞಾಪಕಶಕ್ತಿ ಇರುವವರಿಗೆ ಸೂಕ್ಷ್ಮ ವಿಷಯಗಳು ಅರ್ಥ ವಾಗುವುದಿಲ್ಲ, ಅವಗಾಹನೆಗೆ ಬರುವುದಿಲ್ಲ ಎಂದಿದ್ದೀರಲ್ಲವೆ! ಆದರೆ ಸೂಕ್ಷ್ಮವನ್ನು ಗ್ರಹಿಸಿಕೊಳ್ಳುವ ವರಿಗೆ ಜ್ಞಾಪಕಶಕ್ತಿ ಇಲ್ಲದಿದ್ದರೆ, ಅವರು ಗ್ರಹಿಸಿಕೊಂಡು ಏನು ಪ್ರಯೋಜನ. ಯಾರಿಗೂ ಹೇಳಲಾರರು ಅಲ್ಲವೆ!**

**ಉ॥ :–** ಜ್ಞಾಪಕಶಕ್ತಿ ಇರುವವನು ಯಾವ ಶ್ಲೋಕವನ್ನಾದರೂ, ತಾನು ಓದಿರುವುದೇನನ್ನಾದರೂ ಸುಲಭವಾಗಿ ಹೇಳುತ್ತಾನೆ. ಹಾಗೆ ಹೇಳಿದಷ್ಟು ಮಾತ್ರಕ್ಕೆ ಹೊರಗೆ ದೊಡ್ಡದಾಗಿ ಕಾಣಿಸಿದರೂ, ಆತನಿಗೆ ಮಾತ್ರ ಜ್ಞಾನದ ಸೂಕ್ಷ್ಮತೆ ತಿಳಿದಿರುವುದಿಲ್ಲ. ಆದರೆ ಜ್ಞಾನದಲ್ಲಿನ ಸೂಕ್ಷ್ಮತೆಯನ್ನು ಗ್ರಹಿಸಿದವನಿಗೆ ಜ್ಞಾಪಕಶಕ್ತಿ ಇಲ್ಲದಿದ್ದರೂ, ಆತನಿಗೆ ಜ್ಞಾನಶಕ್ತಿ ಇರುತ್ತದೆ. ಆದ ಕಾರಣ ಜ್ಞಾನದಲ್ಲಿನ ಮುಖ್ಯ ಭಾವವನ್ನು ಸರ್ವಸಾಧಾರಣವಾಗಿ ಹೇಳುತ್ತಾನಾಗಲಿ, ಜ್ಞಾಪಕ ಇರುವವನಂತೆ ಶ್ಲೋಕಗಳು, ಪದ್ಯಗಳು, ಅವುಗಳ ಪೇಜ್‌ನಂಬರ್‌ಗಳು ಮೊದಲಾ ದವುಗಳನ್ನು ಹೇಳಲಾರನು. ಸೂಕ್ಷ್ಮವಾಗಿರುವ ಜ್ಞಾನವನ್ನು ವಿವರಿಸಿ ಅರ್ಥ ವಾಗುವಂತೆ ಹೇಳುತ್ತಾನೆ. ಹಾಗೆ ಹೇಳುವುದಕ್ಕೆ ಜ್ಞಾಪಕಶಕ್ತಿ ಅವಶ್ಯಕವಿಲ್ಲ. ಮನುಷ್ಯ ಶರೀರದಲ್ಲಿನ ಆತ್ಮವೇ ಶ್ಲೋಕಗಳನ್ನು, ಪದ್ಯಗಳನ್ನು ಪೇಜಿನಂಬರ್‌ಗಳನ್ನು ಹೇಳದಂತೆ, ಸ್ವಚ್ಛವಾದ ಜ್ಞಾನವನ್ನು ಮಾತ್ರ ಅರ್ಥವಾಗುವಂತೆ ಬೋಧಿಸುತ್ತಾನೆ. ಜ್ಞಾಪಕಶಕ್ತಿ ಇರುವವರಲ್ಲಿ ಮನಸ್ಸು ದೃಢವಾದುದಾಗಿದ್ದು, ಗ್ರಂಥದಲ್ಲಿನ ವಿಷಯಗಳನ್ನು ಇರುವುದು ಇದ್ದಂತೆ ತಪ್ಪಿಲ್ಲದಂತೆ ಹೇಳಿಸುತ್ತದೆ. ಆದರೆ ಜ್ಞಾನಿಗಳು ಹಾಗೆ ಹೇಳಲಾರರು. ಅಂತಹ ಜ್ಞಾಪಕಶಕ್ತಿ ಅವರಿಗೆ ಇರುವುದಿಲ್ಲ. ಆ ವಿಧವಾಗಿ ಶ್ಲೋಕಗಳು, ಪದ್ಯಗಳು, ವಾಕ್ಯಗಳಿಂದ ಕೂಡಿಕೊಂಡ ಮಾತುಗಳನ್ನು ಹೇಳ ಲಾರರು. ಜ್ಞಾಪಕಶಕ್ತಿ ಇರುವವರಲ್ಲಿ ಮನಸ್ಸು ಬಲವಾಗಿದ್ದು ತಪ್ಪಿಲ್ಲದೆ ವಾಕ್ಯಗಳನ್ನು ಹೇಳಿದರೆ, ಜ್ಞಾನಿಗಳಲ್ಲಿ ಆತ್ಮ ಬಲವಾಗಿದ್ದು ವಾಕ್ಯಗಳನ್ನು, ಶ್ಲೋಕಗಳನ್ನು ಹೇಳದೆ, ಅವುಗಳಲ್ಲಿರುವ ಮೂಲ ಜ್ಞಾನವನ್ನು ಮಾತ್ರ ಹೇಳುತ್ತಾನೆ. ಆದ್ದರಿಂದ ಜ್ಞಾನಿಗಳಿಗೆ ಜ್ಞಾಪಕಶಕ್ತಿ ಇಲ್ಲದಿದ್ದರೂ ಪರವಾಗಿಲ್ಲ.

**7) ಪ್ರಶ್ನೆ :– ಕರ್ಮ ಎನ್ನುವುದು ಮರ್ಮವಾಗಿ ಇರುವುದೆಂದು, ಯಾರಿಗೂ ತಿಳಿಯದಿರುವುದೆಂದು, ಕರ್ಮ ಎನ್ನುವುದು ನಂಬಿಕೆ ಮಾತ್ರವೇ ಎಂದು ನೀವು ಹೇಳಿದ್ದೀರಲ್ಲ! ಯಾರಿಗೂ ತಿಳಿಯದಿರುವುದನ್ನು ನೀವು ಹೇಗೆ ಹೇಳುತ್ತಿದ್ದೀರ? ನಿಮಗೆ ನಂಬಿಕೆಯಾದುದನ್ನು ನಾವ್ಹೇಗೆ ನಂಬಬೇಕು?**

**ಉ॥ :–** ಕರ್ಮ ನಂಬಿಕೆಯಾದುದೇ ಆದರೂ ಅದು ಜಾರಿಗೆ ಬಂದಾಗ ಪ್ರತ್ಯಕ್ಷವಾಗಿ ದುಃಖಪಡುತ್ತಾ ಆಗಲಿ, ಅಥವಾ ಸುಖಪಡುತ್ತಾ ಆಗಲಿ ಅದನ್ನು ಅನುಭವಿಸುತ್ತಿದ್ದೇವೆ. ಆದ್ದರಿಂದ ಕರ್ಮ ಸತ್ಯವಾದುದೆಂದು ತಿಳಿಯುತ್ತಿದೆ. ಅನುಭವಕ್ಕೆ ಬಂದಾಗ ಯಾರ ದುಃಖ ಅವರಿಗೆ ತಿಳಿಯುತ್ತದೆ. ಆದ್ದರಿಂದ ಯಾರ ಕರ್ಮ ಅವರಿಗೆ ಅರ್ಥವಾಗುತ್ತಿದೆ, ಅದಕ್ಕಿಂತ ನಿರೂಪಣೆ ಅವಶ್ಯಕವಿಲ್ಲ. ಕರ್ಮವನ್ನು ಕುರಿತು ನಾನು ಈದಿನ ನಿನಗೆ ಪ್ರತ್ಯೇಕಿಸಿ ಹೇಳುತ್ತಿಲ್ಲ. ದೇವರು ಸೃಷ್ಠಿ ಆದಿಯಲ್ಲಿಯೇ ಕರ್ಮವನ್ನು ಕುರಿತು ಸಂಪೂರ್ಣವಾಗಿ ಹೇಳಿದ್ದಾನೆ. ಆದ್ದರಿಂದ ಕರ್ಮವನ್ನು ಕುರಿತು ನಾವು ನಂಬಬೇಕಾಗಿದ್ದೆ. ಯಾರಾದರೂ ನಂಬಿದರೂ ಅಥವಾ ನಂಬದೆಹೋದರೂ ಅವನು ಅವನ ಕರ್ಮವನ್ನು ಅನುಭವಿಸದೆ ತಪ್ಪುವುದಿಲ್ಲ. ಅನುಭವಿಸುವಾಗ ಇದು ನನ್ನ ಕರ್ಮ ಎಂದು ಅವನಬಾಯಿಂದ ಅವನೇ ಅನ್ನುತ್ತಿರುತ್ತಾನೆ. ಅನುಭವಿಸಿದರೂ ಕರ್ಮ ಎಂದರೆ ಏನೊ ತಿಳಿಯದವನು, ತಲೆ ಇಲ್ಲದ ಮನುಷ್ಯನಿಗೆ ಸಮಾನ. ಯಾವ ಮನುಷ್ಯನಿಗಾದರೂ, ಯಾವ ಪ್ರಾಣಿಗಾದರೂ, ಕರ್ಮ ತಲೆಯಲ್ಲಿಯೇ ಇರುತ್ತದೆ. ಯಾರಾದರೂ ಕರ್ಮವನ್ನು ಇಲ್ಲ ಎಂದರೆ, ಅವನು ತಲೆಯಿಲ್ಲದವನಿಗೆ ಸಮಾನವಾಗುತ್ತಾನೆ. ಯಾರಾದರೂ ನನಗಿರುವುದು ತಲೆಯೇ ತಾನೆ! ತಲೆಕಾಯಿ ಅನ್ನುತ್ತಿದ್ದೀಯಾ ಅಂದರೆ, ಕಾಯಿ ಎಂದರೆ ಫಲ ಎಂದು ಅರ್ಥ. ಕರ್ಮಫಲ ತಲೆಯಲ್ಲಿರುತ್ತದೆ, ಆದ್ದರಿಂದ ಅದನ್ನು ತಲೆಕಾಯಿ ಎನ್ನುವುದು ನಡೆಯುತ್ತಿದೆ.

**8) ಪ್ರಶ್ನೆ :– ತಲೆ ಎಂಬ ಪದಕ್ಕೆ ನೀವು ಜಾಣ್ಮೆಯಿಂದ ಕಾಯಿ ಎನ್ನುವ ಪದವನ್ನು ಸೇರಿಸಿ ತಲೆಕಾಯಿ ಎಂದು ಹೇಳುತ್ತಿದ್ದೀರ. ನಿಮ್ಮ ಮಾತಿನ ಪ್ರಕಾರ ಹೋದರೂ ಕಾಯಿ ಹಸಿರಾಗಿರುತ್ತದೆ. ಅದನ್ನು ತಿನ್ನುವುದಕ್ಕೆ ಬರುವುದಿಲ್ಲ, ಅಂದರೆ**

**ಅನುಭವಿಸುವುದಕ್ಕೆ ಬರುವುದಿಲ್ಲ. ಕಾಯಾಗಿ ಹೇಳಿದ ಕರ್ಮ ಹೇಗೆ ಅನುಭವಕ್ಕೆ ಬರುತ್ತಿದೆ. ಅನುಭವಕ್ಕೆ ಬರುವುದಕ್ಕೆ ಫಲ ಅನ್ನಬೇಕಾಗಲಿ ಕಾಯಿ ಎಂದು ಅನ್ನಬಾರದಲ್ಲವೆ! ಕರ್ಮವನ್ನು ಕರ್ಮಫಲ ಎಂದರೆ ಸರಿಹೋಗುತ್ತದೆ, ಅದರ ಪ್ರಕಾರ ತಲೆಯನ್ನು ತಲೆಫಲ ಎಂದು ಅನ್ನಬಹುದಾಗಲಿ, ತಲೆಕಾಯಿ ಅನ್ನುವುದು ತಪ್ಪು ಅಲ್ಲವೆ! ಇದಕ್ಕೆ ನೀವು ಏನನ್ನುತ್ತೀರಾ? ಹೇಗೆ ಸಮಾಧಾನ ಹೇಳುತ್ತೀರಾ?**

**ಉ॥ :–** ನೀವು ಕೇಳಿದಂತೆ ತಲೆಯನ್ನು ಕೆಲವು ಸಂದರ್ಭಗಳಲ್ಲಿ ಮಾತ್ರ ತಲೆಫಲ ಎಂದು ಅರ್ಥಬರುವಂತೆ ತಲೆಹಣ್ಣು ಎಂದಿದ್ದಾರೆ. ಕೆಲವರ ಲೆಕ್ಕದಲ್ಲಿ ಆಶೀರ್ವಾದವಾಗಿ, ಮತ್ತೆಕೆಲವರ ಲೆಕ್ಕದಲ್ಲಿ ದೂಷಣೆಯಾಗಿರುವ ಪದ ಒಂದು ಇದೆ. ಅದೇ "ನಿನ್ನ ತಲೆ ಸಿಡಿಯಲಿ" ಎಂದು ಅನ್ನುತ್ತಿರುತ್ತಾರೆ. ಈ ವಾಕ್ಯ ಜ್ಞಾನದ ಪ್ರಕಾರ ಆಶೀರ್ವಾದ ಆದರೆ, ಅಜ್ಞಾನದ ಪ್ರಕಾರ ಬೈಗುಳವಾಗಿ, ದೂಷಣೆಯಾಗಿದೆ. ಉದಾಹರಣೆಗೆ ತೆಂಗಿನ ಕಾಯಿ ಎಂದಿಗೂ ಕಾಯಾಗಿಯೇ ಇರುತ್ತದೆ ಹಣ್ಣಾಗುವುದಲ್ಲ ಹಾಗೆಯೇ ತಲೆ ಸಿಡಿಯಲಿ ಎಂಬ ಮಾತಿನ ಅರ್ಥ ಈ ವಿಧವಾಗಿದೆ. ಮಾನವನ ಕರ್ಮ ಪೂರ್ತಿ ನಶಿಸುವವರೆಗೂ ಕಾಯಾಗಿಯೇ ಇರುತ್ತದೆ. ಕರ್ಮ ಪೂರ್ತಿ ನಶಿಸಿದ ನಂತರ ಕಾಯಿ ಹೇಗೆ ಹಣ್ಣಾಗುತ್ತದೊ ಹಾಗೇ ಮಾನವನು ಕರ್ಮಜೀವನದಿಂದ ಮೋಕ್ಷಹೊಂದುವ ಸ್ಥಿತಿಯನ್ನು ತಲೆಹಣ್ಣು ಎನ್ನುವ ಮಾತಾಗಲಿ, ತಲೆಫಲ ಎನ್ನುವ ಮಾತಾಗಲಿ ಕೆಲವು ಸಂದರ್ಭಗಳಲ್ಲಿ ಮಾತ್ರ ಅಂದಿದ್ದಾರಾಗಲಿ, ಉಳಿದ ಸಂದರ್ಭಗಳಲ್ಲಿ ಎಲ್ಲರೂ ತಲೆಯನ್ನು ಕಾಯಾಗಿಯೇ ಹೋಲಿಸಿ ತಲೆಕಾಯಿ ಎನ್ನುವುದು ನಡೆದಿದೆ.

**9) ಪ್ರಶ್ನೆ :– ಕರ್ಮ ಅನುಭವಕ್ಕೆ ಬರುವುದು, ಆದ್ದರಿಂದ ಅದನ್ನು ಉದ್ದೇಶಿಸಿ ತಲೆಯನ್ನು ತಲೆಹಣ್ಣು ಎಂದು ಅನ್ನಬೇಕಾಗಲಿ, ತಲೆಕಾಯಿ ಅನ್ನುವುದು ಏಕೆ?**

**ಉ॥ :–** ನೀನು ಹುಟ್ಟಿದಾಗ ಶಿಶುವಾಗಿದ್ದೀಯಾ. ನಂತರ ಸ್ವಲ್ಪಕಾಲಕ್ಕೆ ಬಾಲಕನಾಗಿ ಕರೆಯಲ್ಪಟ್ಟಿದ್ದೀಯಾ. ಆ ನಂತರ ಈಗ ಮನುಷ್ಯ ಎಂದು ಕರೆಯಲ್ಪಡುತ್ತಿದ್ದೀಯಾ.

ನಿನ್ನದು ಹುಟ್ಟಿದಾಗ ಮನುಷ್ಯನ ಜನ್ಮವೇ ಆದರೂ, ಆಗ ನಿನ್ನನ್ನು ಮನುಷ್ಯ ಎಂದು ಯಾರೂ ಅನ್ನುವುದಿಲ್ಲ. ಸ್ವಲ್ಪ ಬೆಳೆದ ನಂತರ ಸಹಾ ನೀನು ಮನುಷ್ಯನೆ, ಆದರೂ ಆಗಲು ಸಹಾ ನಿನ್ನನ್ನು ಮನುಷ್ಯ ಎಂದು ಅನ್ನುವುದಿಲ್ಲ, ಬಾಲಕ ಎಂದು ಅನ್ನುತ್ತಾರೆ. ಬಾಲ್ಯವೆಲ್ಲಾ ಮುಗಿದುಹೋದ ನಂತರ ಈಗ ನಿನ್ನನ್ನು ಮನುಷ್ಯ ಅನ್ನುತ್ತಿದ್ದಾರೆ. ನೀನು ಮೊದಲು ಹುಟ್ಟಿದಾಗಿನಿಂದ ಮನುಷ್ಯನೇ ಆದರೂ, ಶಿಶುವು, ಬಾಲಕ, ಮನುಷ್ಯ ಎಂದು ಹೇಗೆ ಅನ್ನುತ್ತಿದ್ದಾರೊ ಹಾಗೆ ಕರ್ಮವನ್ನು ಒಂದುಕಾಲದಲ್ಲಿ ಕಾಯಿ ಎಂದಿದ್ದಾರೆ, ಮತ್ತೊಂದುಸಲ ಹಣ್ಣು ಅಂದಿದ್ದಾರೆ. ಯಾವ ಸಂದರ್ಭದಲ್ಲಿ ಹೇಗೆ ಕರೆಯಬೇಕೊ ಹಾಗೆಯೇ ಕರೆಯುತ್ತಿದ್ದಾರೆ. ಮನುಷ್ಯನ ವಯಸ್ಸನ್ನನುಸರಿಸಿ ಶಿಶುವು, ಬಾಲಕ, ಮನುಷ್ಯ ಎಂದು ಅನ್ನುವಂತೆ, ಕರ್ಮವನ್ನು ಸಹಾ ಪಕ್ವವನ್ನನುಸರಿಸಿ ಈಚು, ಕಾಯಿ, ಹಣ್ಣು ಅನ್ನುತ್ತಿದ್ದಾರೆ. ಅದುಹೇಗೋ ವಿವರವಾಗಿ ಹೇಳುತ್ತೇನೆ ಕೇಳು. ಕರ್ಮ ಅನ್ನುವುದು ಕಾಣಿಸದ ಭಾವವೆ ಆದರೂ ಅದಕ್ಕೆ ಮನುಷ್ಯನಂತೆ ಶಿಶುದಶೆ ಇದೆ. ಬಾಲ್ಯದಶೆ ಇದೆ, ನಂತರ ಯೌವನದಶೆ ಇದೆ. ಶಿಶುದಶೆಯಲ್ಲಿ ಮನುಷ್ಯನನ್ನು ಶಿಶುವು ಅನ್ನುವಂತೆ ಕರ್ಮವನ್ನು ಹುಟ್ಟಿನಲ್ಲಿ ಆಗಾಮಿಕ ಅನ್ನುತ್ತಿದ್ದೇವೆ. ಹಾಗೆಯೇ ಬಾಲ್ಯದಶೆಯಲ್ಲಿ ಮನುಷ್ಯನನ್ನು ಬಾಲಕನು ಅಂದಂತೆ ಕರ್ಮವನ್ನು ಸ್ವಲ್ಪಕಾಲದ ನಂತರ ಸಂಚಿತ ಅನ್ನುತ್ತಿದ್ದೇವೆ. ಬಾಲ್ಯ ನಂತರ ಮನುಷ್ಯನಿಗೆ ಬರುವ ಯೌವನ, ಕೌಮಾರ, ವೃದ್ಧಾಪ್ಯದಶೆಗಳಲ್ಲಿ ಮನುಷ್ಯ ಅನ್ನುತ್ತಿದ್ದೇವೆ. ಹಾಗೇ ಸಂಚಿತ ನಂತರ ಕರ್ಮವನ್ನು ಪ್ರಾರಬ್ಧ ಅನ್ನುತ್ತಿದ್ದೇವೆ. ಇದನ್ನೆಲ್ಲಾ ಗಮನಿಸಿದರೆ ಕರ್ಮ ಸಹಾ ಈಚು, ಕಾಯಿ, ಹಣ್ಣಾಗಿ ಇರುವುದರಿಂದ ಕೆಲವು ಸಂದರ್ಭಗಳಲ್ಲಿ ಕರ್ಮವನ್ನು ಕಾಯಾಗಿಯೆ ಕರೆಯಬೇಕು, ಹಾಗೆಯೆ ಕೆಲವು ಸಂದರ್ಭಗಳಲ್ಲಿ ಹಣ್ಣಾಗಿಯೇ ಕರೆಯಬೇಕು. ಮನುಷ್ಯನನ್ನು ಶಿಶುವಾಗಿ ಇರುವಾಗ ಬಾಲಕನೆಂದು, ಬಾಲಕನಾಗಿರುವಾಗ ಶಿಶುವೆಂದು ಹೇಗೆ ಕರೆಯುತ್ತಿಲ್ಲವೊ ಹಾಗೆ ಆಗಾಮಿ, ಸಂಚಿತ, ಪ್ರಾರಬ್ಧಗಳನ್ನು ಕುರಿತು ಏನನ್ನು ಯಾವಾಗ ಏನನ್ನಬೇಕೊ ಆಗ ಹಾಗೆಯೇ ಕರೆಯಬೇಕು.

**10) ಪ್ರಶ್ನೆ :– ಕರ್ಮ ಮೂರು ವಿಧಗಳೆಂದು ತಿಳಿದಿದೆ. ಮನುಷ್ಯನಿಗಿರುವ ಶಿಶು, ಬಾಲ್ಯ ದಶೆಗಳಲ್ಲಿ ಒಬ್ಬ ಪೋಷಕನು ಅಥವಾ ಸಂರಕ್ಷಕನಿದ್ದು ಶಿಶು, ಬಾಲ್ಯದಲ್ಲಿ ಜವಾಬ್ದಾರಿವಹಿಸಿ ಶಿಶುವು ಮನುಷ್ಯನಾಗಿ ಬದಲಾಗುವವರೆಗು ಕಾಪಾಡುತ್ತಿರುತ್ತಾನೆ. ಹಾಗೆಯೇ ಆಗಾಮಿ, ಸಂಚಿತ ಕರ್ಮಗಳಿಗೆ ಯಾರಾದರೂ ರಕ್ಷಕನಾಗಲಿ, ಪೋಷಕನಾಗಲಿ ಇದ್ದಾನಾ?**

**ಉ॥ :–** ಕಾಣಿಸುವ ಶಿಶುವಿಗೆ ಕಾಣಿಸುವ ತಾಯಿ ರಕ್ಷಣೆಯಾಗಿದ್ದು ಪೋಷಿಸುತ್ತಿದೆ. ಬಾಲ್ಯದಶೆಯಲ್ಲಿ ಸಹಾ ತಾಯಿಯೇ ಹೆಚ್ಚಾಗಿ ನೋಡಿಕೊಳ್ಳುತ್ತಾಳೆ, ತಂದೆ ಸ್ವಲ್ಪ ಜವಾಬ್ದಾರಿ ವಹಿಸುತ್ತಾನೆ. ಹಾಗೆ ಕಾಣಿಸದ ಕರ್ಮಕ್ಕೆ ಕಾಣಿಸದ ಆತ್ಮ ತಾಯಿಯಂತೆ ಪೋಷಿಸುತ್ತಿದೆ. ಆಗಾಮಿಕರ್ಮವನ್ನು ಭದ್ರಪಡಿಸುವುದು ಆತ್ಮವೇ. ನಂತರ ಆಗಾಮಿ ಸಂಚಿತವಾಗಿ ಬದಲಾದಾಗ ಸಂಚಿತವನ್ನು ಸಹಾ ತನ್ನ ರಕ್ಷಣೆಯಲ್ಲಿಯೇ ಆತ್ಮ ಇಟ್ಟುಕೊಳ್ಳುತ್ತಿದೆ. ಶಿಶುವು ಸ್ವಲ್ಪ ಕಾಲಕ್ಕೆ ಬಾಲಕನಾಗಿ ಬದಲಾದ ನಂತರ ಸ್ವಲ್ಪಕಾಲ ಬಾಲಕನಾಗಿಯೆ ಇದ್ದು, ಆ ನಂತರ ಮನುಷ್ಯನಾಗಿ ಬದಲಾಗಿ ಸಮಾಜದಲ್ಲಿ ಒಬ್ಬ ವ್ಯಕ್ತಿಯಾಗಿ ಗುರುತಿಗೆ ಬರುತ್ತಿದ್ದಾನೆ. ಹಾಗೆ ಆಗಾಮಿಕರ್ಮ 69 ವರ್ಷಗಳ 5 ತಿಂಗಳ 10 ದಿನಗಳಿಗೆ ಸಂಚಿತವಾಗಿ ಬದಲಾಗಿ ಆತ್ಮ ರಕ್ಷಣೆಯಲ್ಲಿಯೆ ಇದೆ. ಆಗಾಮಿಕವಾಗಿದ್ದಾಗಾಗಲಿ, ಸಂಚಿತವಾಗಿ ಇದ್ದಾಗಾಗಲಿ ಆತ್ಮ ರಕ್ಷಣೆಯಲ್ಲಿರುವ ಕರ್ಮ ಯಾರಿಗು ತಿಳಿಯುವುದಿಲ್ಲ. ಕರ್ಮಚಕ್ರದಲ್ಲಿಯೆ ಆಗಾಮಿ, ಸಂಚಿತ ಕರ್ಮಗಳು ಎರಡೂ ಇದ್ದರೂ, ಅವು ಯಾರಿಗೂ ತಿಳಿಯುವುದಿಲ್ಲ. ಬಾಲಕನು ಮನುಷ್ಯನಾಗಿ ಬದಲಾಗಿ ವ್ಯಕ್ತಿಯಾಗಿ ಸಮಾಜದಲ್ಲಿ ಗುರುತಿಸಲ್ಪಟ್ಟಂತೆ, ಸಂಚಿತಕರ್ಮ ಪ್ರಾರಬ್ಧವಾಗಿ ಬದಲಾದಾಗ ಕರ್ಮಚಕ್ರದಲ್ಲಿ ಜ್ಯೋತಿಷ್ಯರಿಂದ ಗುರುತಿಸಲ್ಪಡುತ್ತಿದೆ. ಜ್ಯೋತಿಯನ್ನು ತಿಳಿದವನು ಜ್ಯೋತಿಷ್ಯನು ಎನ್ನಲ್ಪಡುವನು. ಜ್ಯೋತಿ ಎಂದರೆ ಬೆಳಕನ್ನು ಕೊಡುವ ಜ್ಞಾನ ಎಂದು ತಿಳಿಯಬೇಕು. ಜ್ಯೋತಿಷ್ಯನು ಎಂದರೆ ಜ್ಞಾನಿ ಎಂದು ಅರ್ಥ. ಜ್ಞಾನಿಯಾದವನಿಗೆ ಕರ್ಮ ಎಂದರೇನು ಎಂದು ತಿಳಿಯುತ್ತದೆ. ಕರ್ಮಚಕ್ರದಲ್ಲಿನ ಪ್ರಾರಬ್ಧಕರ್ಮವನ್ನು ಜ್ಯೋತಿಷ್ಯನು ನೋಡಬಲ್ಲನು. ಮನುಷ್ಯ ವ್ಯಕ್ತಿಯಾಗಿ

ಸಮಾಜದಲ್ಲಿ ಗುರುತಿಸಲ್ಪಟ್ಟಂತೆ ಪ್ರಾರಬ್ಧಕರ್ಮವಾಗಿ ಬದಲಾದ ಕರ್ಮ ಕರ್ಮಚಕ್ರದಲ್ಲಿ ಜ್ಞಾನಿಗಳಿಂದ ಗುರುತಿಸಲ್ಪಡುತ್ತಿದೆ. ಆಗಾಮಿ, ಸಂಚಿತವಾಗಿರುವಾಗ ಸ್ವಲ್ಪವೂ ಯಾರಿಂದ ಗುರುತಿಸಲ್ಪಡದಂತಿರುವ ಕರ್ಮ, ಪ್ರಾರಬ್ಧಕರ್ಮವಾಗಿ ಬದಲಾದ ನಂತರ ಗುರುತಿಸಲ್ಪಡುತ್ತಿದೆ. ಕರ್ಮ ಮೂರು ವಿಧಗಳಾಗಿರುವಾಗ ಆತ್ಮವೇ ಅದಕ್ಕೆ ರಕ್ಷಕನು ಪೋಷಕನಾಗಿದೆ. ಆದರೆ ಆಗಾಮಿ, ಸಂಚಿತವಾಗಿರುವಾಗ ಯಾರಿಗು ತಿಳಿಯದಂತೆ ಕರ್ಮಚಕ್ರದಲ್ಲಿಯೆ ಬಚ್ಚಿಟ್ಟಿರುವ ಆತ್ಮ, ಅದೇ ಕರ್ಮ ಪ್ರಾರಬ್ಧವಾದ ನಂತರ ಕರ್ಮಚಕ್ರದಲ್ಲಿ ಜ್ಞಾನಿಗಳಿಗೆ ಕಾಣಿಸುವಂತೆ ಮಾಡುತ್ತಿದೆ.

**11) ಪ್ರಶ್ನೆ :– ಕರ್ಮವನ್ನು ಹಣೆಬರಹ ಎಂದು ಕೆಲವರನ್ನುತ್ತಾರೆ. ಬರಹ ಎಂದು ಏಕೆ ಅನ್ನುತ್ತಿದ್ದಾರೆ?**

**ಉ॥ :–** ಕರ್ಮ ಎನ್ನುವುದು ಬರೆಯಲ್ಪಟ್ಟ ಪೇಪರಿನಂತಹದ್ದು. ಬರೆಯಲ್ಪಟ್ಟ ಪೇಪರ್‌ನಲ್ಲಿ ಸ್ವಲ್ಪ ಸಮಾಚಾರವೇ ಇರುತ್ತದೆ. ಕರ್ಮವೆಂಬುದು ಸ್ವಲ್ಪ, ಇಷ್ಟು ಎಂದು ಪರಿಮಿತಿ ಇಲ್ಲದಂತಿದೆ. ಆದ್ದರಿಂದ ಒಂದು ಕರ್ಮ ಒಂದು ಕಾಗದದಲ್ಲಿ ಬರೆಯಲ್ಪಟ್ಟಿದ್ದರೆ, ಅನೇಕ ಕರ್ಮಗಳು ಬರೆಯುವುದಕ್ಕೆ ಎಷ್ಟೋ ಪೇಪರ್‌ಗಳು ಅಗತ್ಯ. ಹಾಗೆ ಎಷ್ಟೋ ಕರ್ಮಗಳು ಎಷ್ಟೋ ಪೇಪರ್‌ಗಳಲ್ಲಿ ಬರೆಯಲ್ಪಟ್ಟಿರುವು ದರಿಂದ ಅದು ಒಂದು ಗ್ರಂಥದಂತಹದೆಂದು ಹೇಳಬಹುದು. 130 ವರ್ಷಗಳ ಪೂರ್ವದಲ್ಲಿ ಪೇಪರ್‌ಗಳು ಇಲ್ಲ, ಅಚ್ಚುಯಂತ್ರಗಳು ಇಲ್ಲ. ಪೇಪರ್ ಇಲ್ಲದಂತಹ ಕಾಲದಲ್ಲಿ ತಾಳೆಮರದ ಎಲೆಯ ಮೇಲೆ ಬರೆಯುವುದು ನಡೆಯುತ್ತಿತ್ತು. ತ್ರೇತಾಯುಗದಲ್ಲಿ ಆದಿಕವಿಯಾದ ವಾಲ್ಮೀಕಿಹತ್ತಿರದಿಂದ, ಮೂನ್ನೂರಐವತ್ತು ವರ್ಷಗಳ ಪೂರ್ವದಲ್ಲಿ ವೀರಬ್ರಹ್ಮಯ್ಯನವರೆಗೂ, ರಾಮಾಯಣವನ್ನು, ಕಾಲಜ್ಞಾನವನ್ನು ತಾಳೆಮರದ ಎಲೆಗಳ ಮೇಲೆಯೆ ಬರೆಯುವುದು ನಡೆದಿದೆ. ಆದಿನ ಹರಿಶಿನ ಎಣ್ಣೆ ಬಳಿದ ತಾಳೆಮರದ ಎಲೆಗಳ ಮೇಲೆ ಬರೆಯುವುದರಿಂದ, ಬಹಳಕಾಲದ ವರೆಗು ಆ ತಾಳೆಮರದ ಎಲೆಗಳು ಶಿಥಿಲವಾಗದಂತೆ ಇರುತ್ತಿದ್ದವು. ಎಲೆಯನ್ನು ಪತ್ರ ಅನ್ನುತ್ತಿದ್ದರು ತಾಳೆಮರದ ಎಲೆಗಳನ್ನು ತಾಳೆಪತ್ರಗಳು ಎನ್ನುವುದು ನಡೆಯುತ್ತಿತ್ತು. ಪೂರ್ವದಲ್ಲಿ ಎಲೆಗಳ ಮೇಲೆ ಬರಹ

ಬರೆಯುತ್ತಿದ್ದರೆಂದು ಇಂದಿಗೂ ಗುರುತಿರುವಂತೆ ಈದಿನ ಮದುವೆ ವಿಷಯವನ್ನು ಕಾಗದದಲ್ಲಿ ಬರೆಯುತ್ತಿದ್ದರೂ ಅದನ್ನು ಲಗ್ನಪತ್ರ ಎನ್ನುತ್ತಿದ್ದೇವೆ. ಹಾಗೆಯೇ ಬಾಕಿ ವಿಷಯದಲ್ಲಿ ಸಹಾ ಪತ್ರ ಬರೆದುಕೊಳ್ಳೋಣ ಅನ್ನುವುದು ನಡೆಯುತ್ತಿದೆ. ಕೆಲವು ಬರಹ ಸಮಯದಲ್ಲಿ ಈಗಲೂ ಪತ್ರ ಎಂಬ ಹೆಸರು ಉಪಯೋಗಿ ಸಲ್ಪಡುತ್ತಿದೆ. ಹಾಗೆಯೆ ನಮ್ಮ ಶರೀರದಲ್ಲಿ ಕರ್ಮಪತ್ರ ಇದೆಯೆಂದು ಹೇಳಲ್ಪಡುತ್ತಿದೆ. ಕರ್ಮ ಎನ್ನುವುದು ಬರೆಯಲಾದ ಗ್ರಂಥವಂತಹದೆಂದು ಕೊಂಡಿದ್ದೇವಲ್ಲವೆ! ಗ್ರಂಥದಂತಹ ಕರ್ಮ ತಲೆಯಲ್ಲಿನ ಕರ್ಮಚಕ್ರದಲ್ಲಿ ಇರುವುದರಿಂದ, ಕರ್ಮವನ್ನು ಹಣೆಬರಹ ಎನ್ನುವುದು ನಡೆಯುತ್ತಿದೆ. ಯಾರ ಕರ್ಮಪತ್ರ ಅವನ ತಲೆಯಲ್ಲಿದೆ ಎಂದು ಹೇಳುತ್ತಿರುತ್ತಾರೆ. ಕರ್ಮ ಇಲ್ಲದಂತೆ ಹೋಗಿ ಮೋಕ್ಷ ಪಡೆಯಬೇಕೆಂಬ ಭಾವದಿಂದ ಹಿರಿಯರು ಆಶೀರ್ವಾದವನ್ನು ಕೊಡುವಾಗ "ನಿನ್ನ ಎಲೆ ಹರಿದುಹೋಗಲಿ" ಎಂದು ಅನ್ನುವುದು ನಡೆಯುತ್ತಿತ್ತು. ಎಲೆ ಹರಿದರೆ ಕರ್ಮಬರಹ ಇಲ್ಲದಂತೆ ಹೋಗುತ್ತದೆಂಬ ಭಾವನೆಯಿಂದ ನಿನ್ನ ಎಲೆ ಹರಿಯಲಿ ಎಂದು ಅನ್ನುತ್ತಿದ್ದರು. ಬರಹ ಇದ್ದಾಗ ಬರೆಯುವ ಪತ್ರ ಸಹಾ ಇರಬೇಕು ಅಲ್ಲವೆ! ಆದ್ದರಿಂದ ಕರ್ಮಬರಹವನ್ನು ಕರ್ಮಪತ್ರ ಎಂದಿದ್ದಾರೆ. ಕರ್ಮಪತ್ರ ಪ್ರತಿ ಒಬ್ಬರಿಗು ಅವರ ತಲೆಯಲ್ಲೆ ಇರುವುದರಿಂದ, ಅದನ್ನು ಹಣೆಬರಹ ಎಂದು ಸಹಾ ಹೇಳುತ್ತಿರುತ್ತಾರೆ. ಯಾವ ಜ್ಞಾನವೂ ಇಲ್ಲದ ಸಾಧಾರಣ ಮನುಷ್ಯ ಸಹಾ ಏನಾದರೂ ದುಃಖಬಂದಾಗ ಎಲ್ಲಾ ನನ್ನ ಕರ್ಮವೆಂದು ತಲೆಕಡೆ ಕೈಯನ್ನು ತೋರಿಸುತ್ತಾನೆ. ಏನು ತಿಳಿಯದಿದ್ದರು ಆತನ ಕೈ ತಲೆಕಡೆ ತೋರಿಸುವುದು ಆಶ್ಚರ್ಯವಲ್ಲವೆ! ಇನ್ನೂ ಕೆಲವರು ಅಜ್ಞಾನಿಗಳಾದವರು ಸಹಾ ಏನಾದರೂ ಕಷ್ಟಬಂದಾಗ, ಇದೆಲ್ಲಾ ನನ್ನ ಹಣೆಬರಹವೆಂದು ತಲೆಯನ್ನು ಹೊಡೆದುಕೊಳ್ಳುತ್ತಿರುತ್ತಾರೆ. ಕೆಲವರು ತಲೆಯನ್ನು ಹಿಡಿದುಕೊಳ್ಳುತ್ತಾರೆ. ಅವರಿಗೆ ಕರ್ಮವೆಂದರೆ ಏನೆಂದು ತಿಳಿಯದಿದ್ದರೂ ನನ್ನ ಕರ್ಮವೆಂದು ಅವರವರ ತಲೆಯನ್ನು ತೋರಿಸುವುದು ಅವರ ಹಿಂದಿರುವ ಆತ್ಮವೇ ಆ ಕೆಲಸವನ್ನು ಮಾಡಿಸುತ್ತಿದೆಯೆಂದು ಅರ್ಥ ವಾಗುತ್ತಿದೆ. ಹಾಗೆ ತೋರಿಸುವುದರಿಂದ ಕರ್ಮ ಎನ್ನುವುದು ತಲೆಯಲ್ಲಿದೆ ಎಂದು ಆತ್ಮ ಎಲ್ಲರಿಗೂ

ತಿಳಿಸಿದಂತಿದೆ. ಇದನ್ನೆಲ್ಲ ಗಮನಿಸಿದ ಜ್ಞಾನಿಗಳು ಕರ್ಮವನ್ನು ಹಣೆಬರಹವೆಂದು ತಿಳಿಸಿದ್ದಾರೆ.

**12) ಪ್ರಶ್ನೆ :- ಕರ್ಮ ಎನ್ನುವುದು ಎಷ್ಟೋ ವಿಷಯಗಳಿಂದ ಕೂಡಿಕೊಂಡಿದೆ ಎಂದು, ಎಷ್ಟೋ ವಿಷಯಗಳಿರುವುದರಿಂದ ಅದನ್ನು ಎಷ್ಟೋ ಪತ್ರಗಳ ಸಮುದಾಯವಾದ ಒಂದು ಗ್ರಂಥವಿದ್ದಂತೆ ಎಂದು ನೀವು ಹೇಳುವುದು ನಡೆದಿದೆ. ಕರ್ಮವನ್ನು ಕುರಿತು ಹೇಳುವುದರಲ್ಲಿ ನಮಗೆ ಅರ್ಥವಾಗುವುದಕ್ಕೆ ಹಾಗೆ ಬರೆಯಲಾದ ಗ್ರಂಥವೆಂದು ಹೇಳಿದ್ದೀರಾ? ಅಥವಾ ಎಲ್ಲಿಯಾದರೂ ದೇವದೂತರಾದವರು ಮೂಲಗ್ರಂಥಗಳಲ್ಲಿ ಹೇಳಿದ್ದಾರಾ? ಇದಕ್ಕೇನಾದರೂ ಶಾಸ್ತ್ರಾಧಾರ ಇದೆಯಾ?**

**ಉ॥ :-** ನಾವು ಹೇಳುವ ಜ್ಞಾನ ವಿಷಯಗಳೆಲ್ಲವೂ ಶಾಸ್ತ್ರಬದ್ಧವಾದವುಗಳೇ ಇರುತ್ತವೆ. ಶಾಸ್ತ್ರೀಯತೆ ಇಲ್ಲದವುಗಳನ್ನು ಕುರಿತು ನಾವು ಪ್ರಸ್ತಾಪಿಸುವುದಿಲ್ಲ. ಸೃಷ್ಟ್ಯಾದಿಯಲ್ಲಿ ಆಕಾಶವಾಣಿ ಮೂಲಕ ಹೇಳಲಾದ ಜ್ಞಾನ ಖಗೋಳದಲ್ಲಿರುವ ಸೂರ್ಯಗ್ರಹ ಕೇಳಿ ಭೂಮಿಮೇಲಿರುವ ಮನುಷ್ಯರಿಗೆ ತಿಳಿಸಿದಾಗ, ಸ್ವಲ್ಪ ಕಾಲಕ್ಕೆ ಅದು ಅಧರ್ಮಗಳಾಗಿ ಬದಲಾಗಿಹೋಗಿ, ದ್ವಾಪರಯುಗ ಅಂತ್ಯಕಾಲದಲ್ಲಿ ದೇವರು ತನ್ನ ದೂತನಾದ ಶ್ರೀಕೃಷ್ಣನ ಮೂಲಕ, ಏಸು ಮೂಲಕ ಎರಡನೆಸಲ ಭೂಮಿಮೇಲೆ ಹೇಳಿಸಿದ್ದಾನೆ. ಸೂರ್ಯಗ್ರಹ ಮನುಷ್ಯರಿಗೆ ಹೇಳಿದಂತೆ, ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದ ಜಿಬ್ರಯೇಲ್ ಗ್ರಹ 1400 ವರ್ಷಗಳ ಪೂರ್ವದಲ್ಲಿ ಮುಹಮ್ಮದ್ ಪ್ರವಕ್ತರಿಗೆ ಹೇಳುವುದು ನಡೆದಿದೆ. ದೇವದೂತರಾದ ಶ್ರೀಕೃಷ್ಣನು ಹೇಳಿದ ಭಗವದ್ಗೀತೆಯಲ್ಲಿ, ಏಸು ಹೇಳಿದ ಬೈಬಲ್‌ನಲ್ಲಿ, ಜಿಬ್ರಯೇಲ್ ಗ್ರಹ ಹೇಳಿದ ಖುರ್‌ಆನ್‌ನಲ್ಲಿ ಕರ್ಮವನ್ನು ಲಿಖಿತವಾಗಿ ಇದೆಯೆಂದು ಹೇಳಿದ್ದಾರೆ. ಶ್ರೀಕೃಷ್ಣನು ಹೇಳಿದ ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ, ಮೊದಲ ಶ್ಲೋಕದಲ್ಲಿ "ಕಿಂ ಕರ್ಮ ಪುರುಷೋತ್ತಮ" (ಕರ್ಮ ಎಂದರೆ ಏನು ಕೃಷ್ಣಾ) ಎಂದು ಅರ್ಜುನನು ಕೇಳುವುದು ನಡೆದಿದೆ. ಆಗ ಕೃಷ್ಣನು ಮೂರನೆ ಶ್ಲೋಕದಲ್ಲಿ ಉತ್ತರ ಹೇಳುತ್ತಾ "ವಿಸರ್ಗಃ ಕರ್ಮ ಸಂಜ್ಞಿತಃ" ಎಂದು

ಹೇಳಿದ್ದಾನೆ. ಅದರ ಅರ್ಥ ಏನೆಂದರೆ! ಕರ್ಮ ಸಂಜ್ಞಿತಃ ಎಂದರೆ ಗುಂಪಾಗಿರುವ ಕರ್ಮಯೆಂದು ಅರ್ಥ. ವಿಸರ್ಗಃ ಎಂದರೆ ಸೂಕ್ಷ್ಮಾತಿ ಸೂಕ್ಷ್ಮವಾಗಿ ವಿಭಜಿಸಲ್ಪಟ್ಟಿದೆ ಎಂದು ಅರ್ಥ. ಪೂರ್ತಿ ಅರ್ಥವನ್ನು ನೋಡಿದರೆ ಪ್ರತಿ ಚಿಕ್ಕ ವಿಷಯವನ್ನು ಸಹಾ ಲಿಖಿಸಲ್ಪಟ್ಟಿರುವ ಗ್ರಂಥವೆಂದು ಅರ್ಥ. ಕರ್ಮ ಸಂಜ್ಞಿತಃ ಎಂದರೆ ಕರ್ಮ ಕೂಡಲಿಯಾದ ಗ್ರಂಥವೆಂದು ಹೇಳಬಹುದು. ಕರ್ಮವೆಂದರೆ ಏನು? ಎಂದು ಅರ್ಜುನನು ಕೇಳಿದ ಪ್ರಶ್ನೆಗೆ ಶ್ರೀಕೃಷ್ಣನು ಕರ್ಮವೆಂದರೆ ಸೂಕ್ಷ್ಮಾತಿ ಸೂಕ್ಷ್ಮವಾಗಿ ಬಿಡಿಸಿ ಬರೆಯಲಾದ ಕಾರ್ಯಗಳಿಗೆ ಕಾರಣವಾದುದು ಕರ್ಮವೆಂದು ಹೇಳಿದ್ದಾನೆ. ಇನ್ನೂ ಬೈಬಲ್ ಗ್ರಂಥದಲ್ಲಿ ಲೂಕಾ ಸುವಾರ್ತೆ 12ನೇ ಅಧ್ಯಾಯದಲ್ಲಿ 7ನೇ ವಾಕ್ಯದಲ್ಲಿ "ನಿಮ್ಮ ತಲೆಗೂದಲೆಲ್ಲಾ ಲೆಕ್ಕಿಸಲ್ಪಟ್ಟಿವೆ" ಎಂದು ಇದೆ. ಮನುಷ್ಯನ ಶರೀರಕ್ಕೆ ಎಷ್ಟೋ ಮುಖ್ಯವಾದ ಅವಯವಗಳಿವೆ. ಮುಖ್ಯವಾದವುಗಳನ್ನು ಬಿಟ್ಟು ಮುಖ್ಯವಲ್ಲದ ತಲೆಕೂದಲನ್ನು ಕುರಿತು ಅವು ಸಹಾ ಲೆಕ್ಕಿಸಲ್ಪಟ್ಟಿವೆ ಅಂದರೆ ಮುಖ್ಯವಾದ ಪ್ರತಿಯೊಂದನ್ನು ಬಿಡದೆ ಬರೆಯಲಾಗುತ್ತದೆಂದು ಅರ್ಥವಾಗುತ್ತಿದೆ. ಮುಖ್ಯವಲ್ಲದ, ಮಾನವನಿಗೆ ಎಂತಹ ಉಪಯೋಗವಿಲ್ಲದ ಕೂದಲನ್ನೆ ಲೆಕ್ಕದ ಪ್ರಕಾರ ಬರೆದಿದ್ದರೆ, ಉಳಿದ ಬದುಕು ಬಾಳ್ವೆಗೆ ಸಂಬಂದಿಸಿದ ಪ್ರತಿ ವಿಷಯವು ಮೊದಲೆ ಲೆಕ್ಕಿಸಿ ಬರೆದಿವೆಯೆಂದು ಅರ್ಥವಾಗುತ್ತಿದೆ. ಕೂದಲು ಸಹಾ ಲೆಕ್ಕಿಸಲ್ಪಟ್ಟಿವೆ ಎಂಬ ಮಾತು " ಶರೀರವನ್ನು ಸಾಯಿಸಿದ ನಂತರ ಏನು ಮಾಡದವರಿಗೆ ಭಯಪಡದಿರಿ, ಮರಣಿಸಿದ ನಂತರ ನರಕಾಗ್ನಿಯಲ್ಲಿ ಹಾಕುವವನಿಗೆ ಭಯಪಡು" ಎಂದು ಹೇಳಿದಾಗ ಅಂದಿದ್ದಾನೆ. ಇದರ ಅರ್ಥ ಮನುಷ್ಯರಿಗೆ ಭಯಪಡಬೇಕಾದ ಕೆಲಸವಿಲ್ಲ ಕರ್ಮಕ್ಕೆ ಭಯಪಡಬೇಕೆಂದು ಕರ್ಮಪ್ರಕಾರವೇ ಎಲ್ಲಾ ನಡೆಯುತ್ತವೆಂದು ಕರ್ಮಪ್ರಕಾರವೇ ನಿನ್ನ ತಲೆಯಲ್ಲಿನ ಕೂದಲು ಸಹ ಇವೆಯೆಂದು, ಒಂದು ಕೂದಲು ಉದುರಿಹೋಗುವುದಕ್ಕೂ ಸಹಾ ಕಾರಣವಾದ ಕರ್ಮ ಇರಬೇಕೆಂದು ಅರ್ಥವಾಗುವಂತೆ ಹೇಳುತ್ತಾ, ನಿನ್ನ ತಲೆಯಲ್ಲಿನ ಕೂದಲು ಸಹಾ ಲೆಕ್ಕಿಸಲ್ಪಟ್ಟಿವೆ ಎಂದು ಹೇಳಿದ್ದಾನೆ. ಇದನ್ನನುಸರಿಸಿ ನಮ್ಮ ಜೀವನವೆಲ್ಲಾ ಪ್ರತಿಯೊಂದು ಬರೆದಿಟ್ಟ ಕರ್ಮಪ್ರಕಾರವೇ ನಡೆಯುತ್ತದೆಂದು ಅರ್ಥವಾಗುತ್ತಿದೆ. ಒಂದು ಜೀವನಕ್ಕೆ

ಸರಿಹೋಗುವ ಕರ್ಮ ಎಷ್ಟೋ ಇರುತ್ತದೆ. ಆದ್ದರಿಂದ ಕರ್ಮವನ್ನು ಲಿಖಿಸಲ್ಪಟ್ಟ ಗ್ರಂಥ ಎಂದಿದ್ದೇವೆ.

ಮಹಾಜ್ಞಾನಿ ಜಿಬ್ರಯೇಲ್ ಹೇಳಿದ ಖುರ್‌ಆನ್‌ಗ್ರಂಥದಲ್ಲಿ 18ನೇ ಸುರಾ 49ನೇ ಆಯತ್‌ನಲ್ಲಿ "ಕರ್ಮಗಳ ಪತ್ರಗಳು ಅವರಮುಂದೆ ಇಡಲಾಗುತ್ತದೆ. ಅಪರಾಧಿಗಳು ಆ ಪತ್ರಗಳಲ್ಲಿರುವುದನ್ನು ನೋಡಿಕೊಂಡು (ಕರ್ಮವನ್ನು ನೋಡಿಕೊಂಡು) ಭಯಪಡುವುದು ನೀನು ನೋಡುತ್ತೀಯಾ. ಆಗ ಅವರು "ಅಯ್ಯೊ ನಮ್ಮ ದುರದೃಷ್ಟ, ಇದೇನು ಗ್ರಂಥ, ಇದು ಯಾವ ಚಿಕ್ಕ ವಿಷಯವನ್ನಾಗಲಿ, ದೊಡ್ಡ ವಿಷಯವನ್ನಾಗಲಿ, ಬರೆಯದಂತೆ ಬಿಟ್ಟಿಲ್ಲವೆಂದು". ಅನ್ನುತ್ತಾರೆ. ತಾವು ಮಾಡಿಕೊಂಡಿರುವುದೆಲ್ಲ ಅವರು ಪ್ರತ್ಯಕ್ಷವಾಗಿ ನೋಡಿ ಕೊಳ್ಳುತ್ತಾರೆ. ನಿನ್ನ ಪ್ರಭುವು ಯಾವ ಒಬ್ಬನಿಗು ಅನ್ಯಾಯ ಮಾಡುವುದಿಲ್ಲ ಎಂದು ಇದೆ. ಇದನ್ನನುಸರಿಸಿ ಯಾರಿಗಾಗಲಿ, ಅನ್ಯಾಯವಾಗಿ ಕರ್ಮ ಲಿಖಿಸಲ್ಪಡುವುದಿಲ್ಲವೆಂದು, ಇರುವುದು ಇದ್ದಂತೆ ಬರೆಯಲಾಗುತ್ತದೆಂದು ತಿಳಿಯುತ್ತಿದೆ. ದೇವರು ಯಾರಿಗಾಗಲಿ ಕರ್ಮ ಹೆಚ್ಚಿಸುವುದಾಗಲಿ, ಕಡಿಮೆಮಾಡುವುದಾಗಲಿ ಮಾಡದೆ ಯಾರು ಮಾಡಿಕೊಂಡಿರುವುದನ್ನು ಅವರಿಗೆ ಬರೆಯುವಂತೆ ಮಾಡುತ್ತಿದ್ದಾನೆ. ಈ ವಿಷಯವಾಗಿ 53ನೇ ಸೂರಾ, 39, 40, 41 ವಾಕ್ಯಗಳಲ್ಲಿ ಈ ವಿಧವಾಗಿ ಇದೆ. "(39) ಪ್ರತಿ ಮನುಷ್ಯನಿಗು ತಾನು ಕೃಷಿ ಮಾಡಿದ ಅದರ ಫಲಿತ ಹೊರತು ಮತ್ತೊಂದು ಲಭಿಸುವುದಿಲ್ಲ, (40) ನಿಶ್ಚಯವಾಗಿ ತಕ್ಷಣವೇ ಆತನಿಗೆ ಆತನ ಕೃಷಿ ಫಲಿತ ತೋರಿಸಲ್ಪಡುತ್ತದೆ. (41) ಆಗ ಆತನಿಗೆ ಆತನ ಪೂರ್ತಿ ಪ್ರತಿ ಫಲಿತವನ್ನು ಕೊಡಲಾಗುತ್ತದೆ." ಈ ಮೂರು ವಾಕ್ಯಗಳಲ್ಲಿ ಯಾರು ಮಾಡಿಕೊಂಡ ಕರ್ಮ, ಕಾರ್ಯರೂಪದಲ್ಲಿ ಅವನಿಗೆ ಲಭಿಸುತ್ತದೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಕರ್ಮ ಗ್ರಂಥರೂಪದಲ್ಲಿ ಇದೆಯೆಂದು, ಅದರಲ್ಲಿ ಪ್ರತಿ ಚಿಕ್ಕ ವಿಷಯವನ್ನು ಸಹಾ ಬಿಡದಂತೆ ಬರೆದಿಟ್ಟಿದ್ದಾರೆಂದು ಸಹಾ ತಿಳಿದಿದೆ. ಈ ವಿಷಯವನ್ನೇ ಕರ್ಮ ಸಂಗಮ (ಕರ್ಮ ಗ್ರಂಥ) ವಿಸರ್ಗವಾಗಿ (ಅತಿ ಚಿಕ್ಕದಾಗಿ) ವಿಭಜಿಸಿ ಬರೆಯಲ್ಪಟ್ಟಿದೆಯೆಂದು

ಭಗವದ್ಗೀತೆಯಲ್ಲಿ ಹೇಳಲಾಗಿದೆ. ಆದ್ದರಿಂದ ಮೂರು ಮೂಲ ಗ್ರಂಥಗಳಲ್ಲಿ ಕರ್ಮವನ್ನು ವಿವರವಾಗಿ ಹೇಳುತ್ತಾ ಕರ್ಮಸಂಗಮವೆಂದು ಗೀತೆಯಲ್ಲಿ, ಕರ್ಮಚಯವೆಂದು ಮತ್ತೊಂದು ಕಡೆ, ಯಾವ ಚಿಕ್ಕ ವಿಷಯವನ್ನು (ಪಾಪ ವನ್ನು) ಬಿಡದೆ ಬರೆದಿಟ್ಟಿರುವ ಗ್ರಂಥವೆಂದು ಖುರ್‌ಆನ್ ಗ್ರಂಥದಲ್ಲಿಯೂ ಹೇಳಿರುವುದನ್ನನುಸರಿಸಿ ಕರ್ಮವೊಂದರ ಕೂಡಲಿ ನಮ್ಮ ತಲೆಯಲ್ಲಿ ಹೇಗಿದೆಯೋ ಅರ್ಥ ಮಾಡಿಕೊಳ್ಳಬಹುದು.

**13) ಪ್ರಶ್ನೆ :–** ಕರ್ಮ ನೀವು ಹೇಳಿದಹಾಗೆ ಈ ವಿಧವಾಗಿಯೇ ಇರುತ್ತದೆಂದು ಎಲ್ಲರೂ ತಿಳಿದುಕೊಳ್ಳುತ್ತಾರಾ?

**ಉ॥ :–** ಹಾಗೆ ಎಲ್ಲರೂ ತಿಳಿಯುತ್ತಾರೆಂಬುವುದಕ್ಕೆ ಅವಕಾಶವಿಲ್ಲ. ಕರ್ಮ ಎಂಬುದು ಬಹಳ ಸೂಕ್ಷ್ಮವಾದ ಜ್ಞಾನದಿಂದ ಕೂಡಿಕೊಂಡಿದೆ. ಎಷ್ಟೋ ದೊಡ್ಡ ಜ್ಞಾನಿಗಳಿಗೆ ಮಾತ್ರವೆ ಕರ್ಮ ವಿಧಾನ ಅರ್ಥವಾಗುತ್ತದೆ. ದೈವಜ್ಞಾನದ ಮೇಲೆ ವಿಶ್ವಾಸ ಇಲ್ಲದವರಿಗೆ, ದೈವಜ್ಞಾನವನ್ನು ತಿಳಿಯದವರಿಗೆ ಕರ್ಮ ವಿಧಾನ ಸ್ವಲ್ಪವೂ ಅರ್ಥವಾಗುವುದಿಲ್ಲ. ಈ ವಿಷಯವಾಗಿ ಎಷ್ಟೋ ದೊಡ್ಡ ಜ್ಞಾನಿಯಾದ ಯೋಗಿ ವೇಮನ ತನ್ನ ಪದ್ಯಗಳಲ್ಲಿ ಹೀಗೆ ಹೇಳಿದ್ದಾನೆ.

**ಆ॥** **ತಿಳುವಳಿಕೆವೊಂದಲಾರದೆ ತೀರವ ಪಡೆಯದೆ**
**ತಿರುಗುವ ನಸ್ಥಿರನಾಗಿ ದೇಹಿ ಜಗತಿ**
**ತಿರುಗಲೇಕೆ ಕರ್ಮ ತಿಳಿದ ದಿವ್ಯಜ್ಞಾನಿ**
**ವಿಶ್ವದಾಭಿರಾಮ ಕೇಳಯ್ಯ ವೇಮಾ.**

**ಆ॥** **ಹರಿಯುವ ನೀರ ಮೂಲ ಬದುಕು ತಿಳಿಯದೆ**
**ಸಕಲ ಸಂಪದಗಳನ್ನು ಸದೆಬಡೆಯುವ**
**ಕರ್ಮ ಮರ್ಮಗಳನ್ನು ತಿಳಿಯರು ಮೂರ್ಖರು**
**ವಿಶ್ವದಾಭಿರಾಮ ಕೇಳಯ್ಯವೇಮಾ.**

ವೇಮನರು ಹೇಳಿದ ಈ ಎರಡು ಪದ್ಯಗಳಲ್ಲಿ ಮೊದಲನೆಯದರಲ್ಲಿ

ದಿವ್ಯಜ್ಞಾನಿಯಾದವನು ಮಾತ್ರ ಕರ್ಮವನ್ನು ತಿಳಿಯುತ್ತಾನೆಂದು, ಕರ್ಮವನ್ನು ತಿಳಿಯದವರು ಅಜ್ಞಾನಿಗಳಾಗಿ ಸ್ಥಿರವಾದ ಮೋಕ್ಷವನ್ನು ತಿಳಿಯದೆ ಅಸ್ಥಿರನಾಗಿ ತಿರುಗುತ್ತಿರುತ್ತಾನೆಂದು ಹೇಳಿದ್ದಾರೆ. ಎರಡನೆ ಪದ್ಯದಲ್ಲಿ ಭೂಮಿಮೇಲಿರುವ ಸಕಲ ಸಂಪತ್ತು ಯಾವಾಗಲು ಇರುವವೆಂದು, ಸಂಪತ್ತಿನ ಧ್ಯಾಸಹೊಂದಿದ ಮೂರ್ಖರು ಕರ್ಮದ ಮರ್ಮವನ್ನು ತಿಳಿಯಲಾರರೆಂದು ಹೇಳಿದ್ದಾರೆ. ಎರಡು ಪದ್ಯಗಳ ಸಾರಾಂಶದಲ್ಲಿ ದಿವ್ಯಜ್ಞಾನಿಗಳಿಗೆ ಮಾತ್ರ ಕರ್ಮ ಎಂದರೆ ಏನೊ ತಿಳಿಯುತ್ತದೆಂದು, ಮೂರ್ಖರಾದ ಅಜ್ಞಾನಿಗಳಿಗೆ ಕರ್ಮ ತಿಳಿಯದೆಂದು ಹೇಳಲಾಗಿದೆ.

**14) ಪ್ರಶ್ನೆ :–** ಮನುಷ್ಯರು ಮಾಡಿಕೊಂಡ ಎಷ್ಟೋ ಒಳ್ಳೆಯ ಕೆಲಸಗಳ ಫಲಿತವಾದ ಪುಣ್ಯಗಳನ್ನು, ಕೆಟ್ಟ ಕೆಲಸಗಳ ಫಲಿತವಾದ ಪಾಪಗಳನ್ನು ಬೆರೆಸಿ ಕರ್ಮಸಂಗಮ ಅನ್ನುತ್ತಿದ್ದೇವೆ. ಸಂಗಮ ಎಂದರೆ ಒಂದು ಗುಂಪು ಎಂದು ಅಥವಾ ಒಂದು ಮೊತ್ತ ಎಂದೂ ಅರ್ಥಬರುತ್ತದೆ. ಕರ್ಮಸಂಗಮವನ್ನು ಗ್ರಂಥವಾಗಿ ಮೂರು ಮೂಲ ಗ್ರಂಥಗಳಲ್ಲಿ ಹೇಳಿದಂತೆ ತಿಳಿಯುತ್ತಿದೆ. ಅದು ಅಜ್ಞಾನಿಗಳಿಗೆ ತಿಳಿಯದೆಂದು, ಜ್ಞಾನಿಗಳಿಗೆ ಮಾತ್ರ ತಿಳಿಯುವ ಲಿಖಿತಕರ್ಮವೆಂದು ತಿಳಿಯಲ್ಪಟ್ಟಿದೆ. ಬರೆಯಲಾದ ಕರ್ಮ ಒಂದು ಗ್ರಂಥರೂಪದಲ್ಲಿ ಇರುತ್ತದೆಂದು ಹಿರಿಯರು ಹೇಳಿದಂತೆ ನಮಗು ಸಹಾ ಸ್ವಲ್ಪ ಅರ್ಥವಾಗಿದೆ. ಈ ವಿಷಯದಲ್ಲಿ ನಮಗೆ ಒಂದು ಪ್ರಶ್ನೆ ಬಂದಿದೆ. ಅದೇನೆಂದರೆ! ಮರ್ಮವಾಗಿರುವ ಕರ್ಮಗ್ರಂಥ ಕೆಲವು ಭಾಗಗಳಾಗಿದೆಯಾ? ಪಾಪ ಬೇರೆ ಪುಣ್ಯ ಬೇರೆಯಾದ್ದರಿಂದ ಕರ್ಮವೆಂಬ ಗ್ರಂಥ ಸಹಾ ಎರಡು ಭಾಗಗಳಾಗಿ ಇದೆಯಾ? ಅಥವಾ ಎಲ್ಲಾ ಒಂದೇ ಭಾಗವಾಗಿ ಇದೆಯಾ? ತಿಳಿಸಿರಿ.

**ಉ॥ :–** ನಿಮ್ಮ ಪ್ರಶ್ನೆ ಚೆನ್ನಾಗಿಯೇ ಇದೆ ಆದರೆ, ಕರ್ಮವನ್ನು ಕುರಿತು ಹೇಳಬೇಕೆಂದರೆ ನಾನೆಷ್ಟರವನು. ಎಷ್ಟೋ ದೊಡ್ಡ ಜ್ಞಾನಿಗಳಾದರೂ ಕರ್ಮವನ್ನು ಕುರಿತು ಹೇಳುವುದಕ್ಕೆ ಚಡಪಡಿಸುತ್ತಾರೆ. ಏಕೆಂದರೆ! ಎಷ್ಟೋ ತೀಕ್ಷಣವಾದ ಜ್ಞಾನದೃಷ್ಠಿ ಇರುವವರು ಮಾತ್ರವೆ ಕರ್ಮವನ್ನು ಕುರಿತು ಖಚಿತವಾಗಿ ಹೇಳುತ್ತಾರೆ.

ಆದರೂ ನೀವು ಕೇಳಿದ್ದೀರಾದ್ದರಿಂದ ನನಗೆ ತಿಳಿದಮಟ್ಟಿಗೆ ಹೇಳುವುದಕ್ಕೆ ಪ್ರಯತ್ನಿಸುತ್ತೇನೆ. ನಾನು ಏಕೆ ಹೀಗೆ ಹೇಳುತ್ತಿದ್ದೇನೆಂದರೆ ದೊಡ್ಡ ಜ್ಞಾನಿಗಳಾದವರೆ ಯಾವುದು ಕರ್ಮವೊ, ಯಾವುದು ಕರ್ಮ ಅಲ್ಲವೊ ತಿಳಿಯದೆ ಭ್ರಮೆಪಡುತ್ತಿದ್ದಾರೆಂದು ಭಗವದ್ಗೀತೆಯಲ್ಲಿ ಭಗವಂತನೇ ಸ್ವತಃವಾಗಿ ಹೇಳುವುದು ನಡೆದಿದೆ. ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 16ನೇ ಶ್ಲೋಕದಲ್ಲಿ ಹೀಗೆ ಹೇಳುವುದು ನಡೆದಿದೆ ನೋಡಿರಿ.

**ಶ್ಲೋ॥ "ಕೀಂ ಕರ್ಮ ಕಿಮ ಕರ್ಮೇತಿ ಕವಯೋಪ್ಯತ್ರ ಮೋಹಿತಾಃ"**

**ಭಾವಾರ್ಥ :–** "ಯಾವುದು ಕರ್ಮವೊ, ಯಾವುದು ಕರ್ಮ ಅಲ್ಲವೊ ಪಂಡಿತರು (ಜ್ಞಾನಿಗಳು) ಸಹಾ ತಿಳಿಯದೆ ಭ್ರಮಿಸುತ್ತಿದ್ದಾರೆ." ಎಂದು ಹೇಳಿದ್ದಾನೆ. ವೇಮನಯೋಗಿ "ದಿವ್ಯಜ್ಞಾನಿಗಳು ಕರ್ಮವನ್ನು ತಿಳಿಯುತ್ತಾರೆ. ಅಂತಹವರು ಅಲ್ಲದಿದ್ದರೆ ಕರ್ಮವನ್ನು ತಿಳಿಯಲಾರರು." ಎಂದಿದ್ದಾನೆ. ಭಗವಂತನಾದ ಶ್ರೀಕೃಷ್ಣನು, ಮಹಾಯೋಗಿಯಾದ ವೇಮನ ಹೇಳಿದ ಮಾತುಗಳನ್ನನುಸರಿಸಿ ಕರ್ಮ ವಿಷಯದಲ್ಲಿ ಏನು ಮಾತನಾಡಿದರೂ ಜಾಗ್ರತೆಯಾಗಿ, ಕರ್ಮವನ್ನು ಕುರಿತು ಪೂರ್ತಿಯಾಗಿ ತಿಳಿದವರಾಗಿದ್ದು ಮಾತನಾಡಬೇಕು. ನಾನು ವೇಮನ ಯೋಗಿ ಅಂತಹ ಯೋಗಿ ಅಲ್ಲದಿದ್ದರೂ, ನನ್ನ ಪಕ್ಕದವನು, ನನ್ನ ಹಿತನಾದ ಅವನ ಸಹಕಾರದಿಂದ ನಾವು ಇಬ್ಬರೂ ಸೇರಿ ಹೇಳುವುದು ಏನೆಂದರೆ!

ಕರ್ಮ ಎಂಬುವುದು ಗಣಿಯಂತಹದ್ದು, ಗಣಿಯಲ್ಲಿ ಬಗೆದಂತ್ತೆಲ್ಲಾ ಖನಿಜ ದೊರಕುತ್ತಿರುತ್ತದೆ. ಹಾಗೆ ಖನಿಜವಿರುವ ಗಣಿಯಂತಹದ್ದು ಮರ್ಮಗ್ರಂಥ. ಮರ್ಮ ಗ್ರಂಥವನ್ನು ಅಜ್ಞಾನಿಗಳು ತೆರೆದು ನೋಡಿದರೆ ಖಾಲಿ ಪೇಪರ್‌ಗಳು ಕಾಣಿಸುತ್ತವೆ. ಅದರಲ್ಲಿ ಯಾವ ಬರಹ ಕಾಣಿಸುವುದಿಲ್ಲ. ಎಲ್ಲರಿಗೂ ಕಾಣಿಸುವುದಿಲ್ಲ ಆದ್ದರಿಂದ ಅದನ್ನು ಮರ್ಮಗ್ರಂಥ ಅನ್ನುತ್ತಿದ್ದೇವೆ. ಇದೇ ವಿಷಯವನ್ನು ಹೇಳುತ್ತಾ ವೇಮನಯೋಗಿ ತನ್ನ ಪದ್ಯದಲ್ಲಿ ಹೀಗೆ ಹೇಳಿದ್ದಾನೆ.

ಆ॥ **ಕರ್ಮಜಾಲವೆಂದು ಘನರೆಲ್ಲ ನುಡಿದರು**
**ಕರ್ಮವೇನು? ಅದರ ಘನತೆಯೇನು?**
**ಬಿಳಿಯೊ, ಕಪ್ಪೊ, ಕೆಂಪೊ, ತಿಳಿದವರು ನುಡಿದರು**
**ವಿಶ್ವದಾಭಿರಾಮ ಕೇಳಯ್ಯ ವೇಮಾ.**

ವೇಮನ ಹೇಳಿದ ಈ ಮಾತುಗಳನ್ನನುಸರಿಸಿ, ಕರ್ಮವನ್ನು ಕುರಿತು ಘನವಾದವರು (ದೊಡ್ಡವರು) ಹೇಳುತ್ತಿದ್ದರೂ, ಅವರಿಗು ಸಹಾ ಕರ್ಮ ಯಾವುದೊ, ಅದರ ಘನತೆ ಏನೊ ಅವರಿಗೇ ತಿಳಿಯದು. ಕರ್ಮವೆಂಬ ಗ್ರಂಥವನ್ನು ತೆರೆದು ನೋಡಿದರೂ ಅದರಲ್ಲಿ ಕಪ್ಪು ಬಣ್ಣದ ಅಕ್ಷರಗಳಾಗಲಿ, ಬಿಳಿ ಬಣ್ಣದ ಬರಹವಾಗಲಿ, ಕೆಂಪು ಬಣ್ಣದ ಲಿಖಿತವಾಗಲಿ ಏನು ಕಾಣಿಸುವು ದಿಲ್ಲ. ಅಂತಹ ಮರ್ಮಗ್ರಂಥವನ್ನು ಕುರಿತು ತಿಳಿದಾಗಲೇ ಮಾತನಾಡು ಎಂದು ಹೇಳಿದಹಾಗೆ ತಿಳಿಯುತ್ತಿದೆ. ಈಗ ನಾನು ಇದನ್ನು ಕುರಿತಾದ ವಿವರ ಹೇಳಲಾರೆನಾಗಲಿ, ನನ್ನ ಜತೆ ಇರುವವನು ಎಲ್ಲಾ ತಿಳಿದು, ಕರ್ಮಮರ್ಮವನ್ನು ಚೆನ್ನಾಗಿ ತಿಳಿದವನಾಗಿ ಆತನೇ ಸ್ವತಃವಾಗಿ ಹೀಗೆ ಹೇಳುತ್ತಿದ್ದಾನೆ, ಜಾಗ್ರತೆಯಾಗಿ ಕೇಳಿರಿ. "ಕರ್ಮ ಎನ್ನುವುದು ಎಷ್ಟು ದೊಡ್ಡ ಗ್ರಂಥವೊ ಯಾರಿಗೂ ತಿಳಿದಿಲ್ಲ. ಆ ಗ್ರಂಥವನ್ನು ಎಷ್ಟು ಓದಿದರೂ ಆ ಗ್ರಂಥ ಮುಗಿಯುವುದಿಲ್ಲ. ಏಕೆಂದರೆ! ಓದಿದ ಪೇಜಿಗಳನ್ನು ಹರಿದು ಹಾಕುತ್ತಾ ಹೋದರೂ ಎಷ್ಟುಪೇಜಿಗಳನ್ನು ಓದಿ ಹರಿದುಹಾಕುತ್ತಾರೋ ಅಷ್ಟು ಪೇಜಿಗಳಾಗಲಿ, ಅದಕ್ಕಿಂತ ಹೆಚ್ಚಿನ ಪೇಜಿಗಳಾಗಲಿ, ಅಥವಾ ಅದಕ್ಕೆ ಎರಡರಷ್ಟು ಪೇಜಿಗಳಾಗಲಿ ಗ್ರಂಥದ ಕೊನೆಯಲ್ಲಿ ನಾನೇ ಅಂಟಿಸುತ್ತಾ ಇರುತ್ತೇನೆ. ಓದಿ ಹರಿದುಹಾಕಿದ ಪೇಜಿಗಳಲ್ಲಿ ಹೊಸಬರಹ ಬರೆದು ಹಿಂದೆ ನಾನು ಅಂಟಿಸುವುದರಿಂದ ಯಾರು ಎಷ್ಟುಕಾಲ ಓದಿದರೂ ಅದು ಮುಗಿದುಹೋಗುವುದಿಲ್ಲ. ಭೂಮಿಮೇಲೆ ಕರ್ಮಗ್ರಂಥ ಮರ್ಮ ಗ್ರಂಥವಾಗಿದೆ ಎಂದು ಶೇಕಡ ತೊಂಭತ್ತರಷ್ಟು ಜನರಿಗೆ ತಿಳಿಯದು. ಶೇಕಡ ಹತ್ತರಷ್ಟು ಜನರಿಗೆ ತಮ್ಮ ಕರ್ಮದಿಂದ ಕೂಡಿಕೊಂಡ ಮರ್ಮಗ್ರಂಥ ಒಂದಿದೆಯೆಂದು ತಿಳಿದರೂ, ಅದರಲ್ಲಿನ ಬರಹ ಶೇಕಡ ಏಳರಷ್ಟು ಜನರಿಗೆ

ಕಾಣಿಸುವುದಿಲ್ಲ. ಉಳಿದ ಮೂರರಷ್ಟು ಜನರಿಗೆ ಕರ್ಮಗ್ರಂಥ ಅದರಲ್ಲಿನ ಬರಹ ಕಾಣಿಸಿದರೂ, ಓದಿದರೂ, ಅವರಲ್ಲಿ ಶೇ.ಎರಡರಷ್ಟು ಜನರಿಗೆ ನಾನು ಹಿಂದಿನ ಪೇಜಿಗಳನ್ನು ಹೆಚ್ಚಿಸುತ್ತಿದ್ದೇನೆಂದು ತಿಳಿಯದು. ನೂರರಲ್ಲಿ ಒಂದರಷ್ಟು ಇರುವವರ್ಯಾರೋ ಅವರಿಗೆ ಮಾತ್ರ ಕರ್ಮಗ್ರಂಥವನ್ನು ಶಿಥಿಲವಾಗದಂತೆ, ಎಷ್ಟು ಓದಿದರೂ ಮುಗಿದುಹೋಗದಂತೆ ಪೇಜಿಗಳನ್ನು ಅಂಟಿಸುತ್ತಾ, ಆ ಗ್ರಂಥಕ್ಕೆ ರಕ್ಷಕನಾಗಿ, ಪರ್ಯವೇಕ್ಷಕನಾಗಿ ನಾನಿದ್ದೇನೆಂದು ತಿಳಿದವರು, ಗ್ರಂಥವನ್ನು ಬಿಟ್ಟು ನನ್ನಮೇಲೇ ಧ್ಯಾಸವಿಟ್ಟುಕೊಂಡು ನನ್ನಜೊತೆ ಏಕಾಂತ ಸಹವಾಸ ಮಾಡುವುದರಿಂದ, ಅವರನೆತ್ತಿಯ ಮೇಲೆ ಮರ್ಮವಾಗಿರುವ ಕರ್ಮ ಗ್ರಂಥವನ್ನು ನಾನೇ ತೆಗೆದುಹಾಕುತ್ತಿದ್ದೇನೆ. ಕರ್ಮಗ್ರಂಥ ಯಾರ ತಲೆಮೇಲೆ ಇಲ್ಲದಂತೆ ಹೋಗುತ್ತದೊ ಅವನು ನನ್ನೊಂದಿಗೆ ಸಮಾನನಾಗುತ್ತಾನೆ. ಏಕೆಂದರೆ ನನಗೆ ಗ್ರಂಥ ಇಲ್ಲ, ನನ್ನಂತೆ ಅವನಿಗೂ ಗ್ರಂಥವಿಲ್ಲ. ಆದ್ದರಿಂದ ಇಬ್ಬರು ಕಲೆತುಬೆರೆತು ಇರುತ್ತೇವೆ. ಅವನು ಮೂರು, ನಾನು ಆರೇ ಅಂದುಕೊಳ್ಳಿ. ಇಬ್ಬರು ಬೆರೆತಿದ್ದರೆ ಏನಾಗುತ್ತೇವೊ ನೀವೆ ಹೇಳಿರಿ. ಏನಾಗುತ್ತೇವೆ? ಕೇವಲ ಒಂಭತ್ತು ಆಗುತ್ತೇವೆ ಅಷ್ಟೇ! ಇದರಲ್ಲಿ ರಹಸ್ಯ ಏನಿದೆ. ಮೂರು ಆರು ಬೆರೆತರೆ ಒಂಭತ್ತೆ ಅಲ್ಲವೆ!"

**15) ಪ್ರಶ್ನೆ :– ನಾನು ಕೇಳಿರುವುದೇನು? ನೀವು ಹೇಳಿರುವುದೇನು? ಗ್ರಂಥ ಭಾಗಗಳಾಗಿ ಇದೆಯಾ ಎಂದು ಕೇಳಿದ್ದೇನೆ. ನೀವು ನನ್ನ ಮಾತಿಗೆ ಸಮಾಧಾನ ಹೇಳದಂತೆ ಅತ್ತ ತಿರುವಿ ಇತ್ತ ತಿರುವಿ ಎಲ್ಲಿಗೋ ತೆಗೆದುಕೊಂಡುಹೋಗಿ ಮೂರು ಆರು ಬೆರೆತರೆ ಒಂಭತ್ತು ಅನ್ನುತ್ತಿದ್ದೀರ. ಮೂರು ಏನೊ, ಆರು ಏನೊ, ಒಂಭತ್ತು ಏನೊ ನನಗೆ ರವೆಯಷ್ಟು ಸಹಾ ಅರ್ಥವಾಗಲಿಲ್ಲ. ಅವುಗಳನ್ನೆಲ್ಲಾ ಬಿಟ್ಟು ನನ್ನ ಪ್ರಶ್ನೆಗೆ ಉತ್ತರವನ್ನು ಹೇಳಿರಿ. ಅಸಲು ನಿನಗೆ ನನ್ನ ಪ್ರಶ್ನೆಗೆ ಉತ್ತರ ತಿಳಿದಿದೆಯಾ ತಿಳಿದಿಲ್ಲವೊ ಮೊದಲು ಹೇಳು?**

**ಉ॥ :–** ನೀನು ಕೇಳಿದ ಪ್ರಶ್ನೆಗೆ ಬೇಕೆಂದೇ ನಾನು ಉತ್ತರ ಹೇಳಲಿಲ್ಲ. ನಿನ್ನ ಸ್ಥಾನವನ್ನು ನೀನು ತಿಳಿದಾಗ ಮತ್ತೊಬ್ಬನ ಸ್ಥಾನವನ್ನು ಅಂದಾಜು ಹಾಕುತ್ತಿಯಾ. ಆದ್ದರಿಂದ ನಿನ್ನ ಸ್ಥಾನ ಎಷ್ಟೋ ಹೇಳುವುದಕ್ಕೆ ಮೂರು ಆರು ಒಂಭತ್ತು

ಎಂದಿದ್ದೇನೆ. ನೀನು ಎಂದಿಗೂ ಮೂರೇ, ನಾನು ಎಂದಿಗೂ ಆರೇ. ಈಗ ನಿನ್ನಜೊತೆ ಮಾತನಾಡುವುದು ಮೂರಾಗಿರುವ ಮನುಷ್ಯನಲ್ಲ. ಆರಾಗಿರುವ ನಾನು. ಮೊದಲೆ ನಿನ್ನ ಎದುರಿಗಿರುವ ಮನುಷ್ಯ ನಿನ್ನ ಪ್ರಶ್ನೆಗೆ ನಾನು ಉತ್ತರ ಹೇಳಲಾರೆನು, ನನ್ನಜೊತೆ ಇರುವವನು ಹೇಳುತ್ತಾನೆಂದು ಹೇಳಿದ್ದಾನೆ. ಆ ಮಾತು ನಿನಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಆದ್ದರಿಂದ ನನ್ನನ್ನು ಅವನೇ ಅಂದುಕೊಂಡಿದ್ದೀಯಾ. ನಿನ್ನ ಎದುರಿಗಿರುವವನು ಮೂರು. ನಿನ್ನ ಜೊತೆ ಮಾತನಾಡುವವನು ಆರು. ಇದೆಲ್ಲಾ ನಿನಗೆ ಅರ್ಥವಾಗುವುದಿಲ್ಲ ಆದರೆ ನೀನು ಕೇಳಿದ ಪ್ರಶ್ನೆಗೆ ಉತ್ತರ ನಿನ್ನ ಮುಂದಿರುವವನೇ ಹೇಳುತ್ತಾನೆ. ಅವನಿಂದ ನಾನೇ ಹೇಳಿಸುತ್ತೇನೆ ಕೇಳು. ಮರ್ಮಗ್ರಂಥ ಎಂದು ಹೆಸರುವಾಸಿಯಾದ ಕರ್ಮಗ್ರಂಥ ನೀನಂದುಕೊಂಡಂತೆ ಎರಡು ಭಾಗಗಳಾಗಿ ಇಲ್ಲ, ಅದು ಮೂರು ಅಧ್ಯಾಯಗಳಾಗಿ ಇದೆ. ಒಂದೊಂದು ಅಧ್ಯಾಯದಲ್ಲಿ ಹನ್ನೆರಡು ಪಾಠಗಳ ಪ್ರಕಾರ ಮೂರು ಅಧ್ಯಾಯಗಳಿಗೆ 36 ಪಾಠಗಳು ಇವೆ. ಒಂದೊಂದು ಪಾಠದಲ್ಲಿ ಒಂಭತ್ತು ಸಮಾಚಾರಗಳು ಇವೆ. ಆ ಲೆಕ್ಕ ಪ್ರಕಾರ 36 ಪಾಠಗಳಿಗೆ ಒಟ್ಟು 324 ಸಮಾಚಾರಗಳು ಇವೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ! ಕರ್ಮ ಗ್ರಂಥ ವಾಸ್ತವಕ್ಕೆ 324 ಪೇಜಿಗಳ ಪುಸ್ತಕವೇ. ಆದರೂ ಎಷ್ಟು ಪುಟಗಳು ಓದುತ್ತಾ ಹೋದರೂ ಅಷ್ಟು ಪುಟಗಳು ಬೆಳೆಯುವುದರಿಂದ ಅದು ಅಂತ್ಯ ವಿಲ್ಲದ ಗ್ರಂಥವಾಗಿದೆ. ಯಾರಿಗೂ ಅದರ ಪುಟಗಳು ಇಷ್ಟು ಇವೆಯೆಂದು ಅರ್ಥವಾಗಲಿಲ್ಲ. ಯೋಗಿಗಳಾದವರಿಗೆ ಕೆಲವರಿಗೆ ಮಾತ್ರ ಕರ್ಮಗ್ರಂಥದ ಮರ್ಮ ತಿಳಿದಿದೆ. ಆದರೂ ಅವರು ಹೇಳಿದರೂ ಉಳಿದವರು ಕೇಳುವ ಸ್ಥಿತಿಯಲ್ಲಿ ಇಲ್ಲ. ಆದ್ದರಿಂದ ಕರ್ಮ ಗ್ರಂಥವಾಗಲಿ, ಕರ್ಮಗ್ರಂಥದಲ್ಲಿನ ಕರ್ಮಸಿದ್ಧಾಂತವಾಗಲಿ ಯಾರಿಗೂ ಅರ್ಥವಾಗಲಿಲ್ಲ. ದೇವರು ಮೊದಲು ಜ್ಞಾನ ತಿಳಿಸಿದ ಹಿಂದೂ ಸಮಾಜದಲ್ಲಿಯೇ ಕರ್ಮ ವಿಷಯ ಪೂರ್ತಿಯಾಗಿ ಮರ್ಮವಾಗಿಹೋಗಿದೆ. ನಂತರ ಬಂದಿರುವ ಮತಗಳಲ್ಲಿ ಕರ್ಮವಿಧಾನ ಸ್ವಲ್ಪವೂ

ತಿಳಿಯದಂತಾಗಿದೆ. ನಾಸ್ತಿಕವಾದಿಗಳಾದರೆ ಕರ್ಮ ಎನ್ನುವ ಪದ ಅಸತ್ಯ ವಾದುದಾಗಿ ಲೆಕ್ಕಿಸಿಕೊಳ್ಳುತ್ತಿದ್ದಾರೆ. ಕ್ರೈಸ್ತವ, ಇಸ್ಲಾಮ್ ಸಮಾಜಗಳಲ್ಲಿ ಕರ್ಮ ಎಂದರೆ ಏನೊ ಪೂರ್ತಿ ಅವಗಾಹನೆ ಇಲ್ಲದಂತೆ ಹೋಗಿದೆ. ಬೈಬಲ್ ಗ್ರಂಥಕ್ಕಿಂತ ಖುರಾಆನ್ ಗ್ರಂಥದಲ್ಲಿ ಕರ್ಮ ಎಂಬ ಪದ ಹೆಚ್ಚಿನಬಾರಿ ಇದ್ದರೂ ಅದು ಎಲ್ಲೋ ಇರುವ ಸ್ವರ್ಗ ನರಕಗಳ ನಿಮಿತ್ತವೇ ಅಂದುಕೊಂಡಿದ್ದಾರೆ. ಬೈಬಲ್‌ನಲ್ಲಿ ಕರ್ಮವನ್ನು ಹೆಚ್ಚಾಗಿ ಪಾಪ ಎಂದು ಹೇಳಿರುವಾಗ, ಅದಕ್ಕಿಂತ ಹತ್ತಿರವಾಗಿ ಖುರಾಆನ್ ಗ್ರಂಥದಲ್ಲಿ ಕರ್ಮಲಿಖಿತ, ಕರ್ಮ ಗ್ರಂಥ, ಕರ್ಮಪತ್ರ ಎನ್ನುವ ಪದಗಳು ಬಳಸಿ ಹತ್ತಿರ ಭಾವದಿಂದ ಹೇಳಿದರೂ ಅವರು ಕರ್ಮವನ್ನು ಸ್ವರ್ಗ ನರಕಗಳ ನಿಮಿತ್ತವೆಂದು ಸರಿಯಾದ ಭಾವವನ್ನೇ ಹೇಳಿದರೂ ಸ್ವರ್ಗ ನರಕಗಳು ಎಲ್ಲೋ ಇವೆಯೆಂದು ತಪ್ಪಾಗಿ ಅರ್ಥೈಸಿಕೊಂಡಿದ್ದಾರೆ. ಅಷ್ಟೇ ಅಲ್ಲದೆ ಮೋಕ್ಷ ಎನ್ನುವ ಜನ್ಮ ಇಲ್ಲದ ವಿಧಾನವನ್ನು ಸ್ವರ್ಗಕ್ಕೆ ಹೋಲಿಸಿ ಕೊಳ್ಳುವುದರಲ್ಲಿ ಕರ್ಮ ವಿಧಾನ, ಕರ್ಮರಾಹಿತ್ಯವಿಧಾನ ಎರಡೂ ಪೂರ್ತಿ ತಿಳಿಯದಂತೆ ಹೋಗಿವೆ. ಖುರ್‌ಆನ್ ಗ್ರಂಥದಲ್ಲಿ ಎಷ್ಟೋ ಉನ್ನತವಾದ ದೈವಜ್ಞಾನವಿದ್ದರೂ ಒಂದು ವಿಧವಾಗಿ ಅದನ್ನು ಮುಸ್ಲಿಮ್‌ರು ಪೂರ್ತಿಯಾಗಿ ತಿಳಿದುಕೊಳ್ಳದೆ ಹೋಗಿದ್ದಾರೆ. ಒಂದು ಕರ್ಮ ವಿಧಾನದಲ್ಲಿ ಮಾತ್ರ ಜಿಬ್ರಯೇಲ್ ಹೇಳಿದ ಸ್ಥಾನವನ್ನು ತಿಳಿದುಕೊಳ್ಳದೆ ಹೋಗಿದ್ದಾರೆ. ಮುಸ್ಲಿಮ್‌ರೇ ಅಲ್ಲದೆ ಎಲ್ಲಾ ಮತದವರು ಕರ್ಮವನ್ನು ಕುರಿತಾದ ಅವಗಾಹನೆಯನ್ನು ತಿಳಿದುಕೊಳ್ಳದೆ ಹೋಗಿದ್ದಾರೆ.

**16) ಪ್ರಶ್ನೆ :– ನೀವು ಹೇಳುವ ವಿಧಾನದಲ್ಲಿ ಕರ್ಮ ಎನ್ನುವುದು ಎಲ್ಲಿದೆ?**

**ಉ॥** ಶರೀರದಲ್ಲಿನ ತಲೆಯಲ್ಲಿರುವ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳೆನ್ನುವ ನಾಲ್ಕು ಚಕ್ರಗಳ ಸಮುದಾಯದಲ್ಲಿ ಮೇಲಿಂದ ಬ್ರಹ್ಮಚಕ್ರವನ್ನು ಬಿಟ್ಟುಹಾಕಿ ಕೆಳಗಿರುವ ಕಾಲ, ಕರ್ಮ, ಗುಣಚಕ್ರಗಳನ್ನು ಪರಿಶೀಲಿಸಿ ನೋಡಿದರೆ, ಮೂರು ಚಕ್ರಗಳಲ್ಲಿ ಮಧ್ಯದಲ್ಲಿರುವ ಕರ್ಮಚಕ್ರದಲ್ಲಿ ಕರ್ಮ ನೆಲೆ ಇರುತ್ತದೆಂದು, ಕರ್ಮಚಕ್ರವೇ ಕರ್ಮಕ್ಕೆ ಗ್ರಂಥವಾಗಿದೆಯೆಂದು, ಕರ್ಮಚಕ್ರದಲ್ಲಿಯೇ ಕರ್ಮ

ನಮೋದು ಮಾಡಲಾಗುತ್ತಿದೆಂದು ತಿಳಿಯುತ್ತಿದೆ. ಪ್ರತಿ ಮನುಷ್ಯ ಶರೀರದಲ್ಲಿನ ಆತ್ಮವೆ ಆತನಿಗೆ ಪರ್ಯವೇಕ್ಷಕನಾಗಿದ್ದು, ಆತನ ಕರ್ಮಚಕ್ರದಲ್ಲಿ ಅವನು ಮಾಡಿಕೊಂಡ ಒಳ್ಳೆಯ ಕೆಟ್ಟ ಕಾರ್ಯಗಳೊಂದರ ಪುಣ್ಯ ಪಾಪಗಳನ್ನು ನಮೋದು ಮಾಡುತ್ತಿದ್ದಾನೆ. ಇದೇ ವಿಷಯವನ್ನೆ ಖುರ್‌ಆನ್ ಗ್ರಂಥದಲ್ಲಿ 50ನೇ ಸೂರಾದಲ್ಲಿ 18ನೇ ಆಯತ್‌ನಲ್ಲಿ ಹೀಗಿದೆ ನೋಡಿರಿ. "ಮನುಷ್ಯನ ಬಾಯಿಮಾತು ಹೊರಬೀಳದ ಮೊದಲೆ, ಆತನ ಹತ್ತಿರವಿರುವ ಒಬ್ಬ ಪರ್ಯವೇಕ್ಷಕನು, ಅದನ್ನು ಭದ್ರಪಡಿಸುವುದಕ್ಕೆ (ಬರೆದಿಡುವುದಕ್ಕೆ) ಸಿದ್ಧವಾಗಿರುತ್ತಾನೆ." ಈ ಮಾತಿನಲ್ಲಿ ಪರ್ಯವೇಕ್ಷಕನು ಎನ್ನುವ ಹೆಸರಿಗೆ ತಕ್ಕಂತೆ ಮನುಷ್ಯನ ಶರೀರದಲ್ಲಿನ ಆತ್ಮ ಎಲ್ಲಾ ಕೆಲಸಗಳನ್ನು ಮಾಡುತ್ತಾ ಮನುಷ್ಯ ಸಂಪಾದಿಸಿಕೊಳ್ಳುವ ಒಳ್ಳೆಯ ಕೆಟ್ಟ ಕೆಲಸಗಳನ್ನು ಪಾಪಪುಣ್ಯಗಳ ರೂಪದಲ್ಲಿ ನಮೂದಿಸುತ್ತದೆ. ಆದ್ದರಿಂದ ಆತ್ಮವನ್ನು ಉದ್ದೇಶಿಸಿ ಖುರ್‌ಆನ್ ಗ್ರಂಥದಲ್ಲಿ ಪರ್ಯವೇಕ್ಷಕನು ಎಂದು ಹೇಳಲಾಗಿದೆ.

**17) ಪ್ರಶ್ನೆ :- ಮನುಷ್ಯ ಮಾಡುವ ಪ್ರತಿ ತಪ್ಪು ಒಪ್ಪನ್ನು ನಮೂದಿಸುವವನು ಒಬ್ಬನಿದ್ದಾನೆಂದು, ಅವನನ್ನೇ ಪರ್ಯವೇಕ್ಷಕನು ಅಥವಾ ಆತ್ಮ ಅನ್ನುತ್ತಿದ್ದಾರಲ್ಲವೆ! ಅಂತಹದರಲ್ಲಿ ಅವರಿಗಿಷ್ಟವಾದವರು ತಪ್ಪುಮಾಡಿದರೂ ಒಪ್ಪಾಗಿ, ಇಷ್ಟವಿಲ್ಲದವರು ಒಳ್ಳೆಯದು ಮಾಡಿದರೂ ಕೆಟ್ಟದಾಗಿ ಬರೆದುಕೊಳ್ಳಬಹುದಲ್ಲವೆ! ಒಂದುವೇಳೆ ಹಾಗೆ ನಡೆದರೆ ತಪ್ಪು ಮಾಡದವನು ಸಹಾ ಅನ್ಯಾಯವಾಗಿ ಶಿಕ್ಷೆಗೆ ಗುರಿಯಾಗುತ್ತಾನೆ ಅಲ್ಲವೆ! ತಪ್ಪು ಮಾಡದವನ ಮೇಲೆ ತಪ್ಪುಮಾಡಿದ ಹಾಗೆ ನಿಂದನೆ ಹಾಕುವುದು ಒಳ್ಳೆಯದು ಅಲ್ಲವಲ್ಲ! ಎಲ್ಲಿಯಾದರೂ ಹಾಗೆ ನಡೆಯುವುದಕ್ಕೆ ಅವಕಾಶ ಇಲ್ಲವಾ?**

**ಉ॥** ಅಲ್ಲಿ ಒಳ್ಳೆಯ ಕೆಟ್ಟವುಗಳನ್ನು ಬರೆದುಕೊಳ್ಳುವವನು ಪರ್ಯವೇಕ್ಷಕನು. ಆತನು ನಮ್ಮ ಸರ್ಕಾರದಲ್ಲಿನ ಗುಮಸ್ತನಂತಹವನು ಅಲ್ಲ. ಭೂಮಿಮೇಲೆ ಸ್ಥೂಲವಾಗಿ ನಮಗೆ ಕಾಣಿಸುವ ಸರ್ಕಾರದಲ್ಲಿ ಕೆಲಸ ಮಾಡುವ ಗುಮಸ್ತಾಗಳು (ಗುಲಾಮ್ ಕೆಲಸ ಮಾಡುವವರು) ಅಥವಾ ಸೇವೆ ಮಾಡುವವರು, ಅವಿನೀತಿ ಅಕ್ರಮಗಳಿಂದ ಏನಾದರೂ ಮಾಡಬಲ್ಲರು. ಲಂಚಕೊಟ್ಟರೆ ಬೊಂಬೆಯನ್ನು ತಿಮ್ಮಿಯಾಗಿ, ತಿಮ್ಮಿಯನ್ನು ಬೊಂಬೆಯಾಗಿ ಮಾಡಬಲ್ಲರು. ಆದರೆ ಕಾಣಿಸದೆ

ಶರೀರದೊಳಗೆ ನಡೆಯುವ ದೇವರ ಪಾಲನೆಯಲ್ಲಿ (ಒಳಗಿನ ಸರ್ಕಾರದಲ್ಲಿ ) ಸ್ವಚ್ಛವಾದ ಪರಿಪಾಲನೆ ಇದೆ. ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದವರೆ ದೇವರ ಪ್ರಭುತ್ವದಲ್ಲಿ ಸೇವಕರಾಗಿ, ಪಾಲಕರಾಗಿದ್ದಾರೆ. ದೇವರ ಗವರ್ನಮೆಂಟು ಪ್ರತಿ ಶರೀರದಲ್ಲಿಯು ನಡೆಯುತ್ತಲೇ ಇದೆ. ಮನುಷ್ಯರೆಲ್ಲರಿಗು ಹೊರಗೆ ನಡೆಯುವ ರಾಜಕೀಯವೇ ತಿಳಿದಿದೆಯಾಗಲಿ, ಶರೀರದೊಳಗೆ ನಡೆಯುವ ರಾಜಕೀಯ ತಿಳಿಯದು. ಹೊರಗೆ ಯಾರು ರಾಜನಾಗಿ ಮಂತ್ರಿಗಳಾಗಿದ್ದರೂ ಅವರು ಸ್ವಲ್ಪಕಾಲದವರೆಗೇ ಇರುತ್ತಾರೆ. ನಂತರ ಕಾಲದಲ್ಲಿ ರಾಜರು, ಮಂತ್ರಿಗಳು ಬದಲಾಗಿಹೋಗುತ್ತಿರುತ್ತಾರೆ. ಆದರೆ ಒಳಗೆ ಪರಿಪಾಲನೆಯಲ್ಲಿ ಸರ್ಕಾರ ಎಂದಿಗೂ ಬದಲಾಗುವುದಿಲ್ಲ. ಕಾಣಿಸದ ಸರ್ಕಾರಕ್ಕೆ ಅಧಿಪತಿಯಾದ ದೇವರು ಎಂದಿಗೂ ಬದಲಾಗುವುದಿಲ್ಲ. ಹೊರಗೆ ಮನುಷ್ಯರು ಎಷ್ಟೋಜನ ಇದ್ದಾರೆ, ಆದ್ದರಿಂದ ಒಬ್ಬರ ನಂತರ ಮತ್ತೊಬ್ಬರು ರಾಜನಾಗಿ ಬದಲಾಗುತ್ತಿರುತ್ತಾರೆ. ಸೃಷ್ಠಿ ಎಲ್ಲದಕ್ಕೂ ದೇವರು ಒಬ್ಬನೇ ಇದ್ದಾನೆ, ಆದ್ದರಿಂದ ಹೊರಗೆ ಬದಲಾದಂತೆ ಬದಲಾಗುವುದಕ್ಕೆ ಅವಕಾಶವಿಲ್ಲ. ಶಾಶ್ವತವಾಗಿ ಒಂದೇ ಸರ್ಕಾರ, ಒಂದೇ ಪರಿಪಾಲನೆ, ಒಂದೇ ಧರ್ಮ, ಒಂದೇ ಶಾಸನ ಇರುತ್ತದೆ. ಹೊರಗಿನ ಪ್ರಪಂಚದಲ್ಲಿನ ಪಾಲಕರು ಅವಿನೀತಿಪರರಾಗಿ ರಾಜ ಎಂದರೆ ಭಯವಿಲ್ಲದವ ರಾಗಿದ್ದಾರೆ. ಆದರೆ ಒಳಗಿರುವ ಸರ್ಕಾರದಲ್ಲಿನ ಪಾಲಕರೆಲ್ಲರು ದೇವರಿಗೆ ವಿಧೇಯತೆಹೊಂದಿ ಸಕ್ರಮವಾಗಿ ನೀತಿಯಾಗಿ ಪಾಲಿಸುತ್ತಿದ್ದಾರೆ. ಆದ್ದರಿಂದ ದೇವರ ಪಾಲನೆಯಲ್ಲಿ ಅಕ್ರಮಗಳು ನಡೆಯುವುದಕ್ಕೆ ಅವಕಾಶವಿಲ್ಲ. ಈ ಮಾತನ್ನು ಬಲಪಡಿಸುವುದಕ್ಕೆ ಖುರ್‌ಆನ್ ಗ್ರಂಥದಲ್ಲಿ 18ನೇ ಸುರಾ, 49ನೇ ವಾಕ್ಯದ ಕೊನೆಯಲ್ಲಿ "ನಿನ್ನ ಪ್ರಭು ಯಾವೊಬ್ಬರಿಗು ಅನ್ಯಾಯ ಮಾಡುವುದಿಲ್ಲ" ಎಂದು ಇದೆ.

ಪ್ರತಿ ಶರೀರದಲ್ಲೂ ಅವರವರ ಒಳ್ಳೆಯ ಕೆಟ್ಟ ಕರ್ಮಗಳನ್ನು ದಾಖಲಾತಿ (ರಿಕಾರ್ಡು) ಮಾಡುವವನು ಪರ್ಯವೇಕ್ಷಕನು ಎಂದು ಹೇಳಿಕೊಂಡಿದ್ದೇವಲ್ಲ! ಪರ್ಯವೇಕ್ಷಕನು ಒಬ್ಬನು ಎಂದು 50ನೇ ಸೂರಾದಲ್ಲಿ 18ನೇ ವಾಕ್ಯದಲ್ಲಿ

ಇದೆ. ಅಲ್ಲೇ 17ನೇ ಆಯತ್‌ನಲ್ಲಿ "ಆತನೇನು ಮಾಡಿದರೂ ದಾಖಲಾತಿ ಮಾಡಿಕೊಳ್ಳುವವರು ಇಬ್ಬರು ಇರುತ್ತಾರೆ. ಒಬ್ಬನು ಬಲಗಡೆ, ಮತ್ತೊಬ್ಬನು ಎಡಗಡೆ ಕುಳಿತುಕೊಂಡು ಬರೆದುಕೊಳ್ಳುತ್ತಿರುತ್ತಾರೆ." ಈ ವಾಕ್ಯದಲ್ಲಿ ಆತನು ಅಂದರೆ ಮನುಷ್ಯ ಎಂದು ಅರ್ಥ. ಒಬ್ಬ ಮನುಷ್ಯ ಏನು ಮಾಡಿದರೂ, ಅದು ಒಳ್ಳೆಯ ಕೆಲಸವಾದರೂ, ಕೆಟ್ಟಕೆಲಸವಾದರೂ ಅಥವಾ ಒಳ್ಳೆಯ ಮಾತಾದರು ಕೆಟ್ಟ ಮಾತಾದರು ನಮೋದು ಮಾಡಿಕೊಳ್ಳುವವರು ಇಬ್ಬರು ಇದ್ದಾರೆಂದು ಹೇಳಲಾಗಿದೆ. ಈ ವಾಕ್ಯದ ಪಕ್ಕದಲ್ಲಿಯೇ 18ನೇ ಆಯತ್‌ನಲ್ಲಿ ಎಲ್ಲವನ್ನು ದಾಖಲಾತಿ ಮಾಡಿಕೊಳ್ಳುವ ಒಬ್ಬ ಪರ್ಯವೇಕ್ಷಕನಿದ್ದಾನೆಂದು ಹೇಳಲಾಗಿದೆ. ಇಲ್ಲಿ 17ನೇ ಆಯತ್‌ನಲ್ಲಿ ಬರೆದುಕೊಳ್ಳುವವರು ಬಲಎಡವಾಗಿ ಇಬ್ಬರಿದ್ದಾರೆಂದು ಹೇಳಿರುವಾಗ, 18ನೇ ಆಯತ್‌ನಲ್ಲಿ ಒಬ್ಬ ಪರ್ಯವೇಕ್ಷಕನು (ಪರಿಶೀಲಕ) ಎಂದು ಹೇಳುವುದರಿಂದ 17ನೇ ಮತ್ತು 18ನೇ ವಾಕ್ಯಗಳಲ್ಲಿ ಪರಸ್ಪರ ವಿರುದ್ಧ ಭಾವಗಳು ಏರ್ಪಡುತ್ತಿವೆ. ಕರ್ಮವನ್ನು ಅಥವಾ ತಪ್ಪು ಒಪ್ಪುಗಳನ್ನು, ಅಥವಾ ಪಾಪಪುಣ್ಯಗಳನ್ನು ದಾಖಲಾತಿ ಮಾಡುವವರು ಪ್ರತಿ ಮನುಷ್ಯನಿಗೆ ಬಲ ಎಡ ಇಬ್ಬರಿದ್ದಾರೆಂದು 17ನೇ ವಾಕ್ಯದಲ್ಲಿ ಇದೆ ಅಲ್ಲವೆ! ಈ ವಾಕ್ಯವಾದರೂ ಸ್ಪಷ್ಟವಾಗಿ ಅರ್ಥವಾಗಬೇಕೆಂದರೆ ಮೊದಲು ದಾಖಲಾತಿ ಮಾಡಿಕೊಳ್ಳುವವರು ಇಬ್ಬರು ಯಾರು ಎಂದು ತಿಳಿದುಕೊಳ್ಳಬೇಕು? ಮನುಷ್ಯನ ಎಡ ಬಲವಾಗಿ ಇಬ್ಬರಿದ್ದಾರಲ್ಲವೆ! ಅವರು ಮನುಷ್ಯನಿಗೆ ಹೊರಗಾ? ಇಲ್ಲವೆ ಮನುಷ್ಯನಿಗೆ ಒಳಗಾ? ಎನ್ನುವ ಪ್ರಶ್ನೆಗೆ ಉತ್ತರವನ್ನು ತಿಳಿದುಕೊಳ್ಳಬೇಕು. ಒಳಗೊ ಹೊರಗೊ ಎಲ್ಲೋ ಒಂದುಕಡೆ ಇಬ್ಬರಿರುವಾಗ ನಾವು ಸಹಾ ಮನುಷ್ಯರಲ್ಲವೆ! ನಾವು ಮಾಡುವ ಒಳ್ಳೆಯ ಕೆಟ್ಟವುಗಳನ್ನು ದಾಖಲಾತಿ ಮಾಡುವವರು ಇರಬೇಕಲ್ಲವೆ! ಜಿಬ್ರಯೇಲ್ ಹೇಳಿದ ಹಾಗೆ ದಾಖಲಾತಿ ಮಾಡುವವರು ಯಾರಾದರೂ ಇದ್ದಾರಾ? ಇರುವಂತೆ ನಿನಗೆ ತಿಳಿದಿದೆಯಾ? ನೀನು ನೋಡಿದ್ದೀಯಾ? ನಂಬಿದ್ದೀಯಾ? ಒಂದುವೇಳೆ ನಂಬಿದ್ದೀಯಾ ಅಂದುಕೊಳ್ಳೋಣ. 17ನೇ ವಾಕ್ಯದಲ್ಲಿ ಎಡಬಲವಾಗಿ ಇಬ್ಬರು ಬರೆದುಕೊಳ್ಳುವ ವರಿದ್ದಾರೆಂದು ಹೇಳಿದಮಾತನ್ನು ಬಿಟ್ಟು 18ನೇ ವಾಕ್ಯದಲ್ಲಿ ಪ್ರತಿಯೊಂದನ್ನು

ಬರೆದುಕೊಳ್ಳುವವನು ಒಬ್ಬ ಪರಿಶೀಲಕನು (ಒಬ್ಬ ಪರ್ಯವೇಕ್ಷಕ) ಇದ್ದಾನೆಂದು ಹೇಳಿದ್ದಾರಲ್ಲವೆ! ದಾಖಲಾತಿ ಮಾಡುವವರು ಒಬ್ಬರಾ ಇಬ್ಬರಾ? 17ನೇ ವಾಕ್ಯ ಸತ್ಯವಾ? 18ನೇ ವಾಕ್ಯವು ಸತ್ಯವಾ? ಒಂದು ಸತ್ಯವಾದರೆ ಮತ್ತೊಂದು ಅಸತ್ಯವಾಗುತ್ತದಲ್ಲವೆ! ಆಗ ನಮ್ಮ ನಂಬಿಕೆ ಯಾವಕಡೆ, ಯಾವ ವಾಕ್ಯದ ಕಡೆ ಇರಬೇಕು? ಇಷ್ಟು ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿದರೆ ಆಗ ದೇವರು ಹೇಳಿದ ಜ್ಞಾನ ಅರ್ಥವಾಗುತ್ತದೆ.

ಈಗ ಕೆಲವರಿಗೆ ಒಂದು ಸಂಶಯ ಬರಬಹುದು. ಅದೇನೆಂದರೆ! ಪರಸ್ಪರ ವಿರುದ್ಧವಾಗಿರುವ ಎರಡು ವಾಕ್ಯಗಳು ದೇವರ ಜ್ಞಾನವೇನಾ ಎಂದು ಪ್ರಶ್ನೆ ಬರಬಹುದು. ಅದಕ್ಕೆ ನಾವು ಹೇಳುವುದೇನೆಂದರೆ! ಈ ಪ್ರಶ್ನೆಗೆ ಮುಸ್ಲಿಮ್ ಸೋದರರೆ ಸಮಾಧಾನ ಹೇಳಬೇಕಾಗಿದೆ. ಆದರೆ ಅವರ ವಿಷಯ ನನಗೆ ತಿಳಿಯದಾಗಲಿ, ಒಂದು ವಿಧವಾಗಿ ನಾನು ಮುಸ್ಲಿಮ್‌ನೇ ಆದಕಾರಣ ನನಗೆ ತಿಳಿದಿರುವುದು ನಾನು ಹೇಳುತ್ತೇನೆ. ಖುರ್‌ಆನ್‌ನನ್ನು ಮುಹಮ್ಮದ್ ಪ್ರವಕ್ತರಿಗೆ ಹೇಳಿದವನು ಮಹಾಜ್ಞಾನಿಯಾದ ಜಿಬ್ರಯೇಲ್. ಜಿಬ್ರಯೇಲ್ ಸೃಷ್ಠ್ಯಾದಿಯಲ್ಲಿ ದೇವರು ಹೇಳಿದ ಜ್ಞಾನವನ್ನೇ ಮುಹಮ್ಮದ್ ಪ್ರವಕ್ತನಿಗೆ ಹೇಳಿದ್ದಾನೆ. ಸೃಷ್ಯಾದಿಯಲ್ಲಿ ಹೇಳಿದ ಜ್ಞಾನವನ್ನೇ ಸೂರ್ಯನು ಮೊದಲು ಭೂಮಿ ಮೇಲೆ ಪ್ರಜೆಗಳಿಗೆ ತಿಳಿಸಿದ್ದಾನೆ. ಭೂಮಿಮೇಲೆ ಮೊದಲು ಸೂರ್ಯನು ಹೇಳಿದ ಜ್ಞಾನವನ್ನೇ ಪುನಃ ಈಗ ನಿನಗೆ ಹೇಳುತ್ತಿದ್ದೇನೆಂದು ಶ್ರೀಕೃಷ್ಣನು ಅರ್ಜು ನನೊಂದಿಗೆ ಹೇಳಿದ್ದಾನೆ. ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದ ಜ್ಞಾನವನ್ನೇ ಭಗವದ್ಗೀತೆ ಅನ್ನುತ್ತಿದ್ದೇವೆ. ಇದನ್ನನುಸರಿಸಿ ಆದಿಯಲ್ಲಿಯೇ ಭಗವದ್ಗೀತಾ ಜ್ಞಾನ ಹೇಳಲಾಗಿದೆಯೆಂದು, ಅದೇ ಜ್ಞಾನವನ್ನೇ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ಹೇಳಿದ್ದಾನೆಂದು ತಿಳಿಯುತ್ತಿದೆ. ಆದ್ದರಿಂದ ಖುರ್‌ಆನ್‌ನ್ನು ದೈವಗ್ರಂಥ ಅನ್ನದೆ ತಪ್ಪುವುದಿಲ್ಲ. ನಮ್ಮ ದೃಷ್ಠಿಯಲ್ಲಿ ಭಗವದ್ಗೀತೆಯಲ್ಲಿನ ಜ್ಞಾನಕ್ಕೂ, ಖುರಾಆನ್‌ನಲ್ಲಿನ ಜ್ಞಾನಕ್ಕೂ ಯಾವ ವ್ಯತ್ಯಾಸವು ಕಾಣಿಸುವುದಿಲ್ಲ. ಮೊದಲು ಹೇಳಲಾದ ಗೀತಾಜ್ಞಾನವನ್ನು ಪ್ರಥಮ ದೈವಗ್ರಂಥವೆಂದು ಅನ್ನುತ್ತಿದ್ದೇವೆ. ನಂತರ

ಹೇಳಲಾದ ಅದೇ ಜ್ಞಾನವನ್ನೇ ಕೊನೆಯ ದೈವಗ್ರಂಥವೆನ್ನುತ್ತಿದ್ದೇವೆ. ದೇವರ ಜ್ಞಾನ ಆದಿ, ಅಂತಿಮವೆಂಬ ಎರಡು ಕಡೆ ತುಂಬಿದೆ. ಆದ್ದರಿಂದ ಈಕಡೆ ಖುರ್‌ಆನ್‌ನಲ್ಲಿಯೂ ಆಕಡೆ ಭಗವದ್ಗೀತೆಯಲ್ಲಿಯೂ ಮೀರಿದ ಜ್ಞಾನವಿಲ್ಲವೆಂದು ಹೇಳಬಹುದು. ಆದರೆ ಒಂದೇ ದೇವರ ಜ್ಞಾನವು ಮನುಷ್ಯರಲ್ಲಿ ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಅರ್ಥ ಆಗಬಹುದು, ಹಾಗೆಯೇ ಆಗಿದೆ. ಆದ್ದರಿಂದ ನಮ್ಮ ಭಗವದ್ಗೀತೆಯೆಂದು ಹಿಂದೂಗಳು, ನಮ್ಮ ಖುರ್‌ಆನ್ ಎಂದು ಮುಸ್ಲಿಮ್‌ರು ಅನ್ನುತ್ತಿದ್ದಾರೆ. ವಾಸ್ತವವಾಗಿ ನೋಡಿದರೆ ಎರಡರ ಜ್ಞಾನ ಒಂದೇ ಎಂದು ನಮಗೆ ತಿಳಿಯುತ್ತಿದೆ. ಇದೇ ವಿಷಯವೇ ಎಲ್ಲರಿಗೂ ತಿಳಿದು ಮುಸ್ಲಿಮ್‌ರು ಭಗವದ್ಗೀತೆಯನ್ನು, ಹಿಂದುಗಳು ಖುರ್‌ಆನ್‌ನನ್ನು ಓದಿ ಅದರಲ್ಲಿನ ಸತ್ಯವನ್ನು ತಿಳಿದುಕೊಳ್ಳಬೇಕೆಂದು ಕೋರಿಕೊಳ್ಳುತ್ತಿದ್ದೇವೆ.

ನನಗೆ ತಿಳಿದ ಗೀತಾಜ್ಞಾನದಿಂದ, ಖುರ್‌ಆನ್ ಜ್ಞಾನವನ್ನು ಸುಲಭವಾಗಿ ಹೇಳುತ್ತೇನೆಂಬ ನಂಬಿಕೆ ಇದೆ. ಆದ್ದರಿಂದ 50ನೇ ಸೂರಾದಲ್ಲಿ 17, 18 ವಾಕ್ಯಗಳಲ್ಲಿ ಪರಸ್ಪರ ವಿರುದ್ಧವಾಗಿರುವ ವಾಕ್ಯಗಳಿಗು ಸಹ ಸುಲಭವಾಗಿ ಭಾವವು ಅರ್ಥವಾಗಿದೆ. ಆ ಎರಡು ವಾಕ್ಯಗಳು ಎರಡು ಒಂದಕ್ಕೊಂದು ವಿರುದ್ಧವಾಗಿ ಕಾಣಿಸಿದರೂ ಎರಡರಲ್ಲಿ ಒಂದೇ ಭಾವ ಇರುವುದೆಂದು ತಿಳಿಯುತ್ತಿದೆ. ಈ ಮಾತು ಕೆಲವರಿಗೆ ಆಶ್ಚರ್ಯವನ್ನುಂಟುಮಾಡಿದರೂ, ನನ್ನ ಮಾತು ಸತ್ಯವೇ ಆದ್ದರಿಂದ ಅದನ್ನೇ ನಿಮಗೆ ಹೇಳಿದ್ದೇನೆ.

ಅದೇ 50ನೇ ಖಾಫ್ ಸೂರಾದಲ್ಲಿ 21ನೇ ವಾಕ್ಯ (ಆಯತ್) ದಲ್ಲಿ ಮೂವರು ಪುರುಷರು ಕಾಣಿಸುತ್ತಿದ್ದಾರೆ. ಈಗ ವಾಕ್ಯವನ್ನು ನೋಡೋಣ. **"ಪ್ರತಿ ವ್ಯಕ್ತಿ (ಜೀವಿ) ಒಬ್ಬ ನಡೆಸುವವನೊಂದಿಗೆ ಒಬ್ಬ ಸಾಕ್ಷಿಕೊಡುವನೊಂದಿಗೆ ಸಹ ಹಾಜರಾಗುತ್ತಾನೆ."** ಎಂದು (ಖುರಾಆನ್ ಮಜಿದ್‌ನಲ್ಲಿ) **"ಪ್ರತಿ ವ್ಯಕ್ತಿ ತನ್ನಹಿಂದೆ ತನ್ನನ್ನು ತೆಗೆದುಕೊಂಡು ಬರುವವನೊಬ್ಬನು, ಸಾಕ್ಷಿಕೊಡುವವ ನೊಬ್ಬನು ಇರುವ ಸ್ಥಿತಿಯಲ್ಲಿ ಹಾಜರಾಗುತ್ತಾನೆ."** ಎಂದು (ಅಂತಿಮ ದೈವಗ್ರಂಥ ಖುರಾಆನ್‌ನಲ್ಲಿ) **"ಪ್ರತಿ ವ್ಯಕ್ತಿ ತನ್ನಜೊತೆ ಒಬ್ಬ ನಡೆಸುವವನು, ಒಬ್ಬ ಸಾಕ್ಷಿ**

**ಹೇಳುವವನು ಇರುವ ಸ್ಥಿತಿಯಲ್ಲಿ ಬರುತ್ತಾನೆಂದು (ದಿವ್ಯ ಖುರ್‌ಆನ್‌ನಲ್ಲಿ) ಪ್ರತಿ ಆತ್ಮ ಒಬ್ಬ ನಡೆಸುವವನೊಂದಿಗೆ, ಮತ್ತೊಂದು ಸಾಕ್ಷಿಕೊಡುವವನೊಂದಿಗೂ ಸಹಾ ಬರುತ್ತದೆ"** ಎಂದು (ಖುರ್‌ಆನ್ ಭಾವಾಮೃತದಲ್ಲಿ) ಇದೆ. ನಾಲ್ಕು ಖುರ್‌ಆನ್ ಗ್ರಂಥಗಳಲ್ಲಿ ಬರೆದ ವಿಷಯವನ್ನೇ ಬರೆದಿದ್ದೇವೆ. ನಾಲ್ಕು ಗ್ರಂಥಗಳಲ್ಲಿ ಸ್ವಲ್ಪ ಭಾಷೆ ಬೇರೆಯಾದರೂ ಭಾವ ಎಲ್ಲಾ ಒಂದೇಯೆಂದು ತಿಳಿಯುತ್ತಿದೆ. 21ನೇ ವಾಕ್ಯದಲ್ಲಿ ಮೂವರು ಕಾಣಿಸುತ್ತಿದ್ದಾರೆ. ಪ್ರತಿ ಮನುಷ್ಯನಿಗೆ ಒಬ್ಬ ನಡೆಸುವವನು, ಒಬ್ಬ ಸಾಕ್ಷಿ ಇರುವವನೊಂದಿಗೆ ಸಹ ಬರುತ್ತಿದ್ದಾನೆ ಎಂದು ಇದೆ ಅಲ್ಲವೆ! ನಡೆಸುವವನು ಅಥವಾ ಓಡಿಸುವವನು ಎಂದು ಒಬ್ಬರನ್ನು, ಸಾಕ್ಷಿ ಇರುವವನು ಎಂದು ಮತ್ತೊಬ್ಬರನ್ನು, ಓಡಲ್ಪಡುವವನು ಅಥವಾ ನಡೆಯಲ್ಪಡುವ ಜೀವಾತ್ಮ ಎಂದು ಮತ್ತೊಬ್ಬನನ್ನು. ಒಟ್ಟಾರೆ ಮೂವರನ್ನು ಕುರಿತು ಈ ವಾಕ್ಯದಲ್ಲಿ ಹೇಳುವುದು ನಡೆದಿದೆ. ಈ ಮೂವರಲ್ಲಿ ಸಾಕ್ಷಿ ಇರುವವನು, ನಡೆಸಲ್ಪಡುವವನು (ಓಡಿಸಲ್ಪಡುವವನು) ಇಬ್ಬರೂ ಸ್ವತಃ ಯಾವ ಕೆಲಸವನ್ನು ಮಾಡದೆ ಸುಮ್ಮನಿರುವವರೆಂದು ತಿಳಿಯುತ್ತಿದೆ. ಸಾಕ್ಷಿ ಇರುವವನು ಪೂರ್ತಿಯಾಗಿ ಕೆಲಸವಿಲ್ಲದವನಾಗಿ ತಟಸ್ಥನಾಗಿ ಇರುವಾಗ, ನಡೆಸಲ್ಪಡುವವನು ತಾನು ನಡೆಯದಿದ್ದರೂ ಇತರರಿಂದ ತಳ್ಳಲ್ಪಡುತ್ತಿದ್ದಾನೆ. ಒಬ್ಬ ಓಡಿಸುವವನು ಅಥವಾ ನಡೆಸುವವನು ಮುಖ್ಯಪಾತ್ರ ಪೋಷಿಸುತ್ತಾ, ಸರ್ವ ಜಗತ್ತಿನಲ್ಲಿನ ಮನುಷ್ಯರೆಲ್ಲರನ್ನು ಕದಲಿಸಿ ನಡೆಸುತ್ತಿದ್ದಾನೆ. ನಡೆಸುವವನು ಎಲ್ಲರನ್ನು ಕದಲಿಸಿ ನಡೆಸುವುದರಿಂದ ಪ್ರಪಂಚದಲ್ಲಿ ಎಷ್ಟೋ ಕೆಲಸಗಳು ನಡೆಯುತ್ತಿವೆ. ಎರಡನೆ ಯವನು ಹಾಡಿಸಿದರೆ ಮನುಷ್ಯ ಹಾಡುತ್ತಿದ್ದಾನೆ. ಹಾಗೆಯೇ ನಡೆಸುವವನು ಕದಲಿಸಿ ಮಾಡಿಸಿದರೆ ವ್ಯಕ್ತಿ ಎಲ್ಲಾ ಕೆಲಸಗಳು ಮಾಡುತ್ತಿದ್ದಾನೆ. ಈ ವಿಧವಾಗಿ ನಡೆಸುವವನು, ಅಥವಾ ಓಡಿಸುವವನು ಓಡಿಸುತ್ತಿದ್ದರೆ ಮನುಷ್ಯ ಕೆಲಸಗಳು ಮಾಡುತ್ತಿದ್ದಾನೆ. **ಯಾವ ಮನುಷ್ಯ ಭೂಮಿಮೇಲೆ ತಾನು ಸ್ವತಃವಾಗಿ ಯಾವ ಕೆಲಸವನ್ನು ಮಾಡುವುದಿಲ್ಲ**. ಮೊದಲನೆಯವನಾದ ಜೀವಿಯನ್ನು ಅಥವಾ ಜೀವಾತ್ಮವನ್ನು ಎರಡನೆಯವನಾದ ಆತ್ಮ ಓಡಿಸುತ್ತಿರುವಾಗ ಮರಣದವರೆಗು ಮನುಷ್ಯ ಕದಲಿ ಕೆಲಸ ಮಾಡುತ್ತಿದ್ದಾನೆ ಮೂರನೆಯವನಾದ ಸಾಕ್ಷಿ

ಕದಲಿಸುವವನನ್ನು, ಕದಲುವವನನ್ನು ಇಬ್ಬರನ್ನು ನೋಡುತ್ತಿದ್ದಾನೆ. ಆತ್ಮ ಚೈತನ್ಯವಾಗಿದ್ದು ಜೀವಿಯನ್ನು ಕದಲಿಸುತ್ತಿದೆ. ಜೀವಿಯು ಸ್ವತಃವಾಗಿ ಕದಲದವನಾಗಿದ್ದಾನೆ. ಕದಲಿಸುವವನೆ, ಕದಲುವವನ ಒಳ್ಳೆಯ ಕೆಟ್ಟವುಗಳನ್ನೆಲ್ಲ ಬರೆದುಕೊಳ್ಳುತ್ತಿದ್ದಾನೆ. ಆತ್ಮವಾಗಿರುವ ಪರಿಶೀಲಕನೆ ಶರೀರವೆಲ್ಲಾ ಇದ್ದು ಮನುಷ್ಯ ತನ್ನ ಮನಸ್ಸಿನಲ್ಲಿ ಏನಂದುಕೊಂಡರೂ ಅದನ್ನು ದಾಖಲಾತಿ ಮಾಡಿ ಕೊಳ್ಳುತ್ತಿದ್ದಾನೆ. ಜೀವಾತ್ಮ ತನ್ನನ್ನು ನಡೆಸುವ ಆತ್ಮ ವಿಷಯ ತಿಳಿಯದಂತೆ, ನಾನೇ ಸ್ವತಃ ನಡೆಯುತ್ತಿದ್ದೇನೆಂದುಕೊಂಡರೆ ಅವನು ತಪ್ಪು ಮಾಡಿದವನಾಗುತ್ತಾನೆ. ಆಗ ಪರಿರಕ್ಷಕನು, ಪರಿಶೀಲಕನಾದ ಆತ್ಮ ಅವನು ಅಂದುಕೊಂಡಿರುವುದೆಲ್ಲ ಬರೆದುಕೊಳ್ಳುತ್ತಾನೆ. ಶರೀರವೆಲ್ಲಾ ವ್ಯಾಪಿಸಿ ಪರಿರಕ್ಷಕನಾಗಿರುವ ಆತ್ಮ ಒಬ್ಬನೇ ಶರೀರದಲ್ಲಿ ಬಲಗಡೆ ಮತ್ತು ಎಡಗಡೆ ವ್ಯಾಪಿಸಿದ್ದಾನೆ. ಶರೀರವನ್ನು ಅದರಲ್ಲಿನ ಜೀವಿಯನ್ನು ನಡೆಸುವವನು ಶರೀರವೆಲ್ಲ ಬಲ, ಎಡವಾಗಿ ವ್ಯಾಪಿಸಿದ್ದಾನೆ. ಹಾಗೆ ಶರೀರದಲ್ಲಿ ಆಡಿಸುವ ಆತ್ಮ ಒಬ್ಬನು, ಆಡುತ್ತಿರುವ ಜೀವಾತ್ಮ ಮತ್ತೊಬ್ಬನು ಇದ್ದಾನೆ. ಜೀವಾತ್ಮಕ್ಕೆ ಆತ್ಮಯೆಂಬುವವನು ಸರ್ವಕಾಲ ಸಹವಾಸಿಯಾಗಿದ್ದು ಜೀವಿಯು ಎನೆಂದುಕೊಂಡರು ಅದನ್ನು ತಕ್ಷಣ ಲಿಖಿತಪೂರ್ವ ಮಾಡುತ್ತಿದ್ದಾನೆ. ಆ ಲಿಖಿತಪೂರ್ವ ಗ್ರಂಥವನ್ನೇ ಕರ್ಮಪತ್ರ ಎನ್ನುತ್ತಿದ್ದೇವೆ.

ಜೀವಾತ್ಮ, ಆತ್ಮ ಅಲ್ಲದೆ ಶರೀರದೊಳಗೆ, ಶರೀರದ ಹೊರಗೆ ಅಣುಅಣುವಿನಲ್ಲಿ ಎಲ್ಲಾಕಡೆ ವ್ಯಾಪಿಸಿರುವವನು ದೇವರು. ದೇವರು ಕ್ರಿಯಾ ರಹಿತನು, ಕೆಲಸ ಮಾಡದವನು, ದೇವರಿಗೆ ರೂಪವಿಲ್ಲ, ದೇವರಿಗೆ ಹೆಸರು ಇಲ್ಲ. ದೇವರು ನಾಮ, ರೂಪ, ಕ್ರಿಯಾರಹಿತನೆಂಬುವುದು ದೇವರ ಮುಖ್ಯವಾದ ಧರ್ಮ. ದೇವರು ನೋಡುವವನೇ ಆಗಲಿ ಏನು ಮಾಡುವುದಿಲ್ಲ. ಆತನು ಏನು ಮಾಡದೇ ಮಾಡಬೇಕಾದ ಕಾರ್ಯಗಳನ್ನೆಲ್ಲ ಆತನ ಪಾಲನೆಯಲ್ಲಿ ರುವವರೇ ಮಾಡುತ್ತಾರೆ. ದೇವರ ಸೃಷ್ಠಿ ಎಲ್ಲವೂ ದೇವರ ಸೇವಕರಾದ ದೇವದೂತರೆಂಬುವ ಗ್ರಹಗಳಿಂದ, ಭೂತಗಳಿಂದ ನಡೆದುಹೋಗುತ್ತಿದೆ. ಆದ್ದರಿಂದ ಆತನು ನೋಡುವವನೇ, ಅಂದರೆ ಸಾಕ್ಷಿಯಾಗಿರುವವನೇ ಎಂದು

ತಿಳಿಯಬೇಕು. 50ನೇ ಸೂರಾದಲ್ಲಿ 21ನೇ ವಾಕ್ಯದ ಪ್ರಕಾರ, ಆ ವಾಕ್ಯದಲ್ಲಿರುವಂತೆ ನಡೆಸಲ್ಪಡುವ ಜೀವಾತ್ಮ, ನಡೆಸುವ ಆತ್ಮ, ಎಲ್ಲವನ್ನು ನೋಡುವ ಪರಮಾತ್ಮ (ದೇವರು) ಮೂವರು ಇದ್ದಾರೆಂದು ಜ್ಞಾಪಕ ಇಟ್ಟುಕೊಳ್ಳಬೇಕು. 17ನೇ ವಾಕ್ಯದಲ್ಲಿ ಬಲಎಡಗಡೆ ಇಬ್ಬರು ದಾಖಲಾತಿ ಮಾಡುತ್ತಿದ್ದಾರೆಂದು ಹೇಳುವುದರಲ್ಲಿ ಒಂದು ವಿವರ ಇದೆ. ಅದು ಏನೆಂದರೆ! ಮನುಷ್ಯ ಮಾಡುವ ಕೆಲಸಗಳಲ್ಲಿ ಒಳ್ಳೆಯ ಕೆಲಸಗಳು, ಕೆಟ್ಟ ಕೆಲಸಗಳು ಎಂದು ಎರಡು ವಿಧಗಳಾಗಿ ಇವೆ. ಒಳ್ಳೆಯ ಕೆಲಸಗಳನ್ನು ದಾಖಲಾತಿ ಮಾಡುವವನನ್ನು ಬಲಗಡೆ ಇರುವವನಾಗಿ, ಕೆಟ್ಟ ಕೆಲಸಗಳು ದಾಖಲಾತಿ ಮಾಡುವವನನ್ನು ಎಡಗಡೆ ಇರುವವನನ್ನಾಗಿ ಹೇಳಲಾಗಿದೆ. ಖುರಾನ್‌ನಲ್ಲಿ ಇದು "ಮುತಷಾಭಿಹತ್" ವಾಕ್ಯ. ಈ ವಾಕ್ಯಕ್ಕೆ ಸ್ಥೂಲವಾದ ಅರ್ಥ ತೆಗೆದುಕೊಂಡರೆ ಏನು ತಿಳಿಯದು. ಇದನ್ನು ಸೂಕ್ಷ್ಮವಾಗಿಯೇ ಅರ್ಥಮಾಡಿಕೊಳ್ಳಬೇಕು. ಆದ್ದರಿಂದಲೇ ಅವಗಾಹನೆ ಇರುವವನಿಗೆ ಶರೀರದಲ್ಲಿ ಎರಡುಕಡೆ ವ್ಯಾಪಿಸಿ ಒಳ್ಳೆಯ ಕೆಟ್ಟ ಎರಡನ್ನು ದಾಖಲಾತಿ ಮಾಡಿಕೊಳ್ಳುವ ಆತ್ಮವನ್ನೇ ಬಲಎಡ ಇರುವವನಾಗಿ ಹೇಳಲಾಗಿದೆ. ಪ್ರತಿ ಮನುಷ್ಯನಿಗು ಇರುವುದು ಒಬ್ಬ ಸಹವಾಸಿಯೇ. ಆತನೇ ಆತ್ಮ, ಆತನೇ ನಿನಗೆ ಜೀವನಾಂತ್ಯದವರೆಗೂ ಜೀವನವೆಲ್ಲ ಜೊತೆಯಾಗಿದ್ದಾನೆ. ಆತನೆ ಮನುಷ್ಯನನ್ನು ಮರಣದವರೆಗು, ಮರಣದಿಂದ ಹುಟ್ಟುವವರೆಗು ನಡೆಸುತ್ತಿದ್ದಾನೆ. ಹುಟ್ಟಿನಿಂದ ಮರಣದವರೆಗು ನಡೆಸುತ್ತಲೆ ಇದ್ದಾನೆ. ಅಂತಹ ಸಹವಾಸಿ ಯಾರೊ ಯಾರಿಗು ತಿಳಿಯದು. ನಿನ್ನ ಸಹವಾಸಿಯನ್ನು ಕುರಿತು ದೇವರು ಖುರ್‌ಆನ್ ಗ್ರಂಥದಲ್ಲಿ ಎಷ್ಟೊ ಹೇಳಿದರೂ, ಮನುಷ್ಯ ಅದನ್ನು ಗ್ರಹಿಸಲಾರದೆ ಹೋಗುತ್ತಿದ್ದಾನೆ. ಕೆಲವರು ಸಹವಾಸಿಯಾದ, ಪರಿರಕ್ಷಕನಾದ ಆತ್ಮವನ್ನು ಸಹಾ ಸೈತಾನಾಗಿ ಹೋಲಿಸಿಕೊಳ್ಳುತ್ತಿದ್ದಾರೆ. ಸೈತಾನ್ (ಮಾಯೆ) ಬೇರೆ ಸಹವಾಸಿ ಬೇರೆಯೆಂದು ಮನುಷ್ಯ ಅವಗಾಹನೆಯೊಳಗೆ ಬರುತ್ತಿಲ್ಲ. ಆದ್ದರಿಂದ ಖುರಾಆನ್ ಗ್ರಂಥದಲ್ಲಿ ಎಷ್ಟೋ ಜ್ಞಾನ ವಿಷಯವಿದ್ದರೂ ಬಹಳಜನರಿಗೆ ಆ ಗ್ರಂಥದಿಂದ ಏಕೇಶ್ವ ರೊಪಾಸನೆ ಹೊರತು ಏಕೇಶ್ವರನ ಜ್ಞಾನ ಸ್ವಲ್ಪವೂ ತಿಳಿಯಲಿಲ್ಲ. ಏಕೇಶ್ವರನಾದ ದೇವರು ತಿಳಿಯಬೇಕೆಂದರೆ ಖುರ್‌ಆನ್ ಗ್ರಂಥದಿಂದ ಕರ್ಮವೆಂದರೆ ಏನೊ,

ಅದು ಮನುಷ್ಯನ ಬಳಿ ಹೇಗೆ ಜಾರಿ ಆಗುತ್ತಿದೆಯೊ, ಹೇಗೆ ಸಂಪಾದಿ ಸಲ್ಪಡುತ್ತಿದೆಯೊ ಮೊದಲು ತಿಳಿಯಬೇಕು. ದೈವಗ್ರಂಥ ಹತ್ತಿರವಿದ್ದರೂ ದೈವಧರ್ಮಗಳನ್ನು ಒಂದನ್ನು ಸಹಾ ಮನುಷ್ಯ ತಿಳಿಯಲಾರದೆಹೋಗುತ್ತಿದ್ದಾನೆ. ದೇವರು ಸೂಕ್ಷ್ಮವಾದವನು. ದೇವರ ಜ್ಞಾನ ಸಹಾ ಸೂಕ್ಷ್ಮವಾದುದೆ. ಅಂತಹವನನ್ನು ಸೂಕ್ಷ್ಮವಾದ ವಾಕ್ಯಗಳಿಂದಲೇ, ಸೂಕ್ಷ್ಮವಾದ ವಿವರದಿಂದಲೇ ತಿಳಿಯಬೇಕು. ಹಾಗಲ್ಲದೆ ಸೂಕ್ಷ್ಮ ಧರ್ಮಗಳೆಲ್ಲ ಕಲ್ಪಿತಗಳೆಂಬ ನೆಪದಿಂದ ಸೂಕ್ಷ್ಮವಾದ ವಿವರ ತಿಳಿಯದೆಹೋದರೆ, ಖುರ್‌ಆನ್ ನಲ್ಲಿನ ವಾಕ್ಯಗಳೆ ಪರಸ್ಪರ ವಿರುದ್ಧವಾಗಿ ಕಾಣಿಸುತ್ತವೆ. ಅಂತಹ ವಾಕ್ಯಗಳು ಎಂದಿಗೂ ಅರ್ಥವಾಗುವುದಿಲ್ಲ. 50ನೇ ಸೂರಾದಲ್ಲಿ 17ನೇ ವಾಕ್ಯಕ್ಕು 18ನೇ ವಾಕ್ಯಕ್ಕು ಸರಿಯಾದ ಅರ್ಥವನ್ನು ಸೂಕ್ಷ್ಮ ಗ್ರಾಹಿತಶಕ್ತಿ ಇಲ್ಲದವರು ಎಂದಿಗೂ ತಿಳಿಯಲಾರರು.

ನಡೆಸಲ್ಪಡುವವನು, ನಡೆಸುತ್ತಿರುವವನು, ಸಾಕ್ಷಿಯಾಗಿರುವವನು ಈ ಮೂವರು ಹೊರತು ಪ್ರಪಂಚದಲ್ಲಿ ಇನ್ಯಾರು ಇಲ್ಲ. ಪ್ರತಿ ಜೀವರಾಶಿ ಜೀವಾತ್ಮವಾದರೆ, ಅವುಗಳೆಲ್ಲವನ್ನು ನಡೆಸುವವನು ಆತ್ಮವಾದರೆ, ಸಾಕ್ಷಿಯಾಗಿರುವವನು ದೇವರಾಗಿ ಇದ್ದಾನೆ. ಈ ಮೂರು ಆತ್ಮಗಳು ವಿನಹ ಇರುವುದೆಲ್ಲಾ ಪ್ರಕೃತಿಯೆ. ಜೀವಾತ್ಮ ಅನ್ನುವುದು ಅನೇಕ ಜೀವರಾಶಿಗಳಾಗಿದ್ದು ಪ್ರಪಂಚವೆಲ್ಲಾ ತುಂಬಿದೆ. ಆತ್ಮಯೆಂಬುದು ಪ್ರತಿ ಜೀವರಾಶಿ ಶರೀರದಲ್ಲಿ ಜೀವಿಗೆ ಜೊತೆಯಾಗಿದ್ದು ಸಹವಾಸಿಯಾಗಿ, ಅಥವಾ ಜೋಡಿ ಆತ್ಮವಾಗಿ ಹೆಸರುಗಳಿಸಿದೆ. ಬೈಬಲ್‌ನಲ್ಲಿ ಎರಡನೇ ಆತ್ಮವನ್ನೇ ಪಕ್ಕದವನೆಂದು ಹೇಳಿದ್ದಾರೆ. ಇನ್ನು ಮೂರನೆಯವನು ಆತ್ಮಗಿಂತ ಪರವಾಗಿರುವ ಪರಮಾತ್ಮ, ಪರಮಾತ್ಮನನ್ನೇನಾವು ದೇವರು ಎಂದು ಅನ್ನುತ್ತಿದ್ದೇವೆ. ಮನುಷ್ಯನಿಗೆ ಕುಲಗಳು, ಮತಗಳು ಬೇರೆಯಾದರೂ ದೇವರು ಎಲ್ಲರಿಗು ಸಾಕ್ಷಿಯಾಗಿರುವವನೇ, ಎಲ್ಲಾ ಮತದವರು ಮನುಷ್ಯರೇ, ಮತ್ತು ಶರೀರದಲ್ಲಿರುವ ಜೀವರಾಶಿಗಳೇ. ಯಾವ ಮತಸ್ಥನಿಗಾದರೂ, ಅವರ ಶರೀರವೆಲ್ಲ ಆತ್ಮತುಂಬಿಕೊಂಡು, ಶರೀರವೆಲ್ಲಾ ವ್ಯಾಪಿಸಿದ್ದು ಅವನನ್ನು ನಡೆಸುತ್ತಿದೆ. ಆತ್ಮ ನಡೆಸದೆ ಯಾವ ಮತಸ್ಥನು ಕದಲಲಾರನು. ಆತ್ಮವಿಲ್ಲದೆ

ಯಾರೂ ಇಲ್ಲವೆಂದು ತಿಳಿಯಬೇಕು. ಆತ್ಮ ಮನುಷ್ಯನಾದ ಪ್ರತಿ ಒಬ್ಬರಲ್ಲಿದ್ದು ಅವನನ್ನು ನಡೆಸುತ್ತಿರುವಾಗ, ಆ ವಿಷಯ ತಿಳಿಯದ ಅಜ್ಞಾನಿಯಾದ ಮನುಷ್ಯ, ನಡೆದ ಕೆಲಸಗಳನ್ನೆಲ್ಲ ತಾನೇ ಮಾಡಿದಂತೆ ಅಂದುಕೊಳ್ಳುತ್ತಿದ್ದಾನೆ. ಪ್ರಪಂಚದಲ್ಲಿ ಯಾವ ಮನುಷ್ಯನಿಗೂ ಒಳಗಿರುವ ಆತ್ಮ ವಿಧಾನ ತಿಳಿಯದಂತಾಗಿದೆ. ನಾನು ಈಗ ಈ ಗ್ರಂಥವನ್ನು ಬರೆಯುತ್ತಿದ್ದೇನೆ ಅಂದರೆ ಅದು ಜೀವಾತ್ಮನಾದ ನಾನು ಮಾಡುವುದು ಅಲ್ಲ. ಈ ಕೆಲಸವೆಲ್ಲ ಆತ್ಮವೇ ಮಾಡುತ್ತಿದೆ. ಗುಡಿಯಲ್ಲಿನ ಪೂಜಾರಿ ಪೂಜೆ ಮಾಡುತ್ತಿದ್ದರೂ, ಒಬ್ಬ ಹಂತಕನು ಮತ್ತೊಬ್ಬನನ್ನು ಸಾಯಿಸುತ್ತಿದ್ದರು, ವಿಟನು ವೇಶ್ಯ ಪಕ್ಕದಲ್ಲಿ ಶೃಂಗಾರವನ್ನು ನಡೆಸುತ್ತಿದ್ದರು, ಹಸಿವುಗೊಂಡವನು ಆಹಾರವನ್ನು ತಿನ್ನುತ್ತಿದ್ದರು, ಫುಟ್‌ಬಾಲ್ ಆಡುವವನು ಪ್ಲೇಗ್ರೌಂಡ್‌ನಲ್ಲಿ ಫುಟ್‌ಬಾಲ್ ಆಡುತ್ತಿದ್ದರು, ಯುದ್ಧದಲ್ಲಿ ಸೈನಿಕನು ಶತ್ರು ಸೈನ್ಯದಿಂದ ಹೋರಾಟ ನಡೆಸುತ್ತಿದ್ದರೂ, ಒಬ್ಬನು ರಾಜಕೀಯದಲ್ಲಿದ್ದು ಎಲೆಕ್ಷನ್‌ಗೋಸ್ಕರ ಉಪನ್ಯಾಸಿ ಸುತ್ತಿದ್ದರೂ, ಬೆಕ್ಕು ಇಲಿ ಮೇಲೆ ದಾಳಿ ಮಾಡುತ್ತಿದ್ದರು, ಹಾವು ಕಪ್ಪೆಯನ್ನು ಹಿಡಿದುಕೊಳ್ಳುತ್ತಿದ್ದರೂ, ಒಬ್ಬ ಮತ ಗುರು ಶಿಷ್ಯರಿಗೆ ಬೋಧನೆಯನ್ನು ಹೇಳುತ್ತಿದ್ದರು, ಒಬ್ಬ ಪೈಲೆಟ್ ಆಕಾಶದಲ್ಲಿ ವಿಮಾನ ನಡೆಸುತ್ತಿದ್ದರು, ಡಾಕ್ಟರ್ ಪೇಷೆಂಟಿಗೆ ಆಪರೇಷನ್ ಮಾಡುತ್ತಿದ್ದರೂ, ನನ್ನ ಬರಹಗಳು ನೋಡಿ ಅಸೂಯೆಯಿಂದ ನನ್ನನ್ನು ದೂಷಿಸುತ್ತಿದ್ದರು, ಅಥವಾ ಅಭಿಮಾನದಿಂದ ಹೊಗಳುತ್ತಿದ್ದರು ಎಲ್ಲವನ್ನು ಎಲ್ಲರಲ್ಲಿದ್ದು ಮಾಡುವವನು ಆತ್ಮವೆಂದು ಮರೆಯಬಾರದು. ಪ್ರಪಂಚದಲ್ಲಿರುವ ಒಟ್ಟಾರೆ ಜೀವರಾಶಿಗಳು ಮಾಡುವ ಕೆಲಸಗಳೆಲ್ಲವನ್ನು ಆತ್ಮ ಮಾಡುತ್ತಿದ್ದಾನೆ. ಆದ್ದರಿಂದ ಆತ್ಮವನ್ನು ನಡೆಸುವವನು ಎಂದು ಖುರ್‌ಆನ್ ಗ್ರಂಥದಲ್ಲಿ ಮಹಾಜ್ಞಾನಿಯಾದ ಜಿಬ್ರಯೇಲ್ ಹೇಳಿದ್ದಾನೆ. ಜಿಬ್ರಯೇಲ್‌ಗೆ ತಿಳಿದಿದೆ ದೇವರು ಏನು ಮಾಡುವ ವನಲ್ಲವೆಂದು, ಆದ್ದರಿಂದ ದೇವರನ್ನು ಸಾಕ್ಷಿಭೂತನೆಂದು ಹೇಳಿದ್ದಾನೆ. ಸಾಕ್ಷಿಭೂತನು ಅಂದರೆ! ಭೂತಗಳಾದ ಎಲ್ಲಾ ಜೀವಾತ್ಮಗಳಿಗೆ ಸಾಕ್ಷಿಯಾಗಿದ್ದಾ ನೆಂದು ಅರ್ಥ.

ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳಲ್ಲಿ ಪರಮಾತ್ಮ ಸಾಕ್ಷಿಯಾದ ದೇವರಾಗಿದ್ದು, ಆತ್ಮ ಎಲ್ಲರನ್ನು ನಡೆಸುವ ಚೈತನ್ಯ ಸ್ವರೂಪವಾದ ಶಕ್ತಿಯಾಗಿದ್ದು, ಜೀವಾತ್ಮ ಎಲ್ಲಾ ಶರೀರಗಳಲ್ಲಿ ಕರ್ಮ ಜೀವಿಗಳಾಗಿದ್ದು ಕರ್ಮವನ್ನು ಅನುಭವಿಸುತ್ತಾ ಜೀವಿಸುತ್ತಿದೆ. ಈ ಮೂರು ಆತ್ಮಗಳು ಸೃಷ್ಟಿ ಮೊದಲಿನಿಂದ ಇವೆ. ಮೊದಲು ಸೃಷ್ಟ್ಯಾದಿಯಲ್ಲಿ ದೇವರಾದ ಪರಮಾತ್ಮನಿಂದ ಆತ್ಮ, ಜೀವಾತ್ಮಗಳು ಸೃಷ್ಟಿಸಲ್ಪಟ್ಟಿವೆ. ಆದ್ದರಿಂದ ಸರ್ವ ಜೀವರಾಶಿಗಳಿಗೂ, ಅವುಗಳಲ್ಲಿನ ಆತ್ಮಗಳಿಗೂ ದೇವರೆ ಸೃಷ್ಟಿಕರ್ತ, ಅಧಿಪತಿ. ಆತ್ಮ ದೇವರಿಂದ ಹುಟ್ಟಿರುವುದು ಸರ್ವಪ್ರಪಂಚವನ್ನು ನಡೆಸುತ್ತಿದೆ. ದೇವರ ನಂತರ ಶಕ್ತಿ ಇರುವುದು ಆತ್ಮ. ಆತ್ಮಕ್ಕೆ ದೇವರ ಜ್ಞಾನವೆಲ್ಲವು ತಿಳಿದಿದೆ. ಆದರೆ ಜೀವಿಯು ಪೂರ್ತಿ ಅಜ್ಞಾನಿಯಾಗಿದ್ದಾನೆ. ದೇವರು ಮನುಷ್ಯನಿಗಾಗಿ ಜ್ಞಾನವನ್ನು ಭೂಮಿಮೇಲೆ ಮೂರು ವಿಧಾನಗಳಾಗಿ ಹೇಳಿಸಿದರೂ ಈಗಲೂ ಅದೇ ಜ್ಞಾನ ಭಗವದ್ಗೀತೆ, ಬೈಬಲು, ಖುರ್‌ಆನ್ ಗ್ರಂಥಗಳ ರೂಪದಲ್ಲಿದ್ದರೂ, ಅವುಗಳಲ್ಲಿನ ದೇವರ ಜ್ಞಾನವನ್ನು ಗುರುತಿಸಲಾರದೆ, ದೇವರ ಜ್ಞಾನಕ್ಕು ಸಹಾ ಮತಗಳ ಬಣ್ಣವನ್ನು ಬಳಿದಿದ್ದಾರೆ. ಮತ ಎಂಬ ಮಾಯೆಯಿಂದ ಹೊರಬೀಳದೆ ಸೃಷ್ಟಿ ಎಲ್ಲವನ್ನು ಸೃಷ್ಟಿಸಿದ ದೇವರನ್ನು ಸಹಾ ನಿಮ್ಮ ದೇವರು, ನಮ್ಮ ದೇವರು ಎಂದು ಸೀಳಿಸಿ ಹೇಳುತ್ತಿದ್ದಾರೆ. ಹಾಗೆ ಮೂರು ಗ್ರಂಥಗಳಲ್ಲಿನ ಜ್ಞಾನ ಬೇರೆಬೇರೆಯೆಂದು ಕೊಳ್ಳುತ್ತಿದ್ದಾರೆ. ಹೀಗೆ ಮನುಷ್ಯ ಪೂರ್ತಿ ಅಜ್ಞಾನಿಯಾಗಿ ಬದಲಾಗಿಹೋದಾಗ ಆತನಲ್ಲಿನ ಆತ್ಮಕ್ಕು ಸಹಾ ಬೇಸರಬಂದು ಆತನನ್ನು ಕಠಿಣವಾಗಿ ಶಿಕ್ಷಿಸುವುದಕ್ಕೆ ಆರಂಭಿಸುತ್ತದೆ. ಆದರೂ ಶಿಕ್ಷೆ ಯಾರಿಂದ ಬರುತ್ತಿದೆಯೆಂದು ಸಹಾ ತಿಳಿಯದ ಸ್ಥಿತಿಯಲ್ಲಿ ಮಾನವನಿದ್ದಾನೆ.

ಇಂತಹ ಅಜ್ಞಾನದಿಂದ ಕೂಡಿಕೊಂಡ ಮನುಷ್ಯನಿಗೆ ಆತ್ಮಜ್ಞಾನ ತಿಳಿಯುವಂತೆ, ದೇವರು ಆಧ್ಯಾತ್ಮಿಕ ವಿದ್ಯೆಯಲ್ಲಿ ಮೂರು ಆತ್ಮಗಳಿಗೆ ಮೂರು ಗುರುತಿಗಾಗಿ ಇಟ್ಟಿದ್ದಾನೆ. ಜೀವಾತ್ಮಕ್ಕೆ ಸಂಖ್ಯಾ (ಗಣಿತ) ಶಾಸ್ತ್ರದಲ್ಲಿನ ಮೂರು (3) ಸಂಖ್ಯೆಯನ್ನು ಗುರುತಿಗಾಗಿ ಇಟ್ಟಿದ್ದಾನೆ. ಹಾಗೆಯೇ ಆತ್ಮಕ್ಕೆ ಆರು (6)

ಸಂಖ್ಯೆಯನ್ನು ಗುರುತಾಗಿಟ್ಟಿದ್ದಾನೆ. ದೇವರಾದ ಪರಮಾತ್ಮಕ್ಕೆ ಒಂಭತ್ತು (9) ಸಂಖ್ಯೆಯನ್ನು ಗುರುತಿಗೆ ಇಟ್ಟಿದ್ದಾನೆ. ಈ ವಿಧವಾಗಿ ಜೀವಾತ್ಮ, ಆತ್ಮ, ಪರಮಾತ್ಮ 3, 6, 9 ಸಂಖ್ಯೆಗಳನ್ನು ಗುರುತಿಗಾಗಿ ಏರ್ಪಡಿಸಲಾಗಿದೆ. ಹಾಗೆ ಮೂರು ಬೇರಬೇರೆ ಬೆಲೆಗಳುಳ್ಳ ಸಂಖ್ಯೆಗಳಿಂದ ಗುರುತಿಸಲ್ಪಟ್ಟಿರುವುದರಿಂದ ಮೂರು ಆತ್ಮಗಳು ಬಿಡಿಬಿಡಿಯಾಗಿ, ಬೇರಬೇರೆ ಪ್ರಭಾವ ಇರುವವಾಗಿ ಇವೆಯೆಂದು ಸುಲಭವಾಗಿ ತಿಳಿಯಬಹುದು. ಈಗ ನಡೆಸಲ್ಪಡುವವನು ಮೂರು ಗುರುತಿರುವ ಜೀವಾತ್ಮಯೆಂದು, ನಡೆಸುವವನು ಆರು ಗುರುತಿರುವ ಆತ್ಮಯೆಂದು, ಸಾಕ್ಷಿಯಾಗಿರುವವನು ಒಂಭತ್ತಾಗಿರುವ ದೈವವೆಂದು ಸುಲಭವಾಗಿ ತಿಳಿದು ಹೋಗುತ್ತಿದೆ. ಈ ಮೂರು ಆತ್ಮಗಳ ವಿಷಯವನ್ನೇ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ 16, 17 ಶ್ಲೋಕಗಳಲ್ಲಿ ಕ್ಷರನು, ಅಕ್ಷರನು, ಪುರುಷೋತ್ತಮನೆಂದು ವಿವರಿಸಿ ಹೇಳಿದ್ದಾನೆ. ಸರ್ವಪ್ರಪಂಚಕ್ಕೆ ಮೂಲವಾದ ಈ ಮೂರು ಆತ್ಮಗಳನ್ನು ಖುರ್‌ಆನ್ ಗ್ರಂಥದಲ್ಲಿ 50ನೇ ಸೂರದಲ್ಲಿ 21ನೇ ವಾಕ್ಯದಲ್ಲಿ ಹೇಳಿದಾಗ, ಆ ವಿಷಯವು ಪೂರ್ತಿ ಅವಗಾಹನೆಗೆ ಬಾರದಂತೆ ಹೋಗಿದೆ. ಇದಕ್ಕು ಮೊದಲು ಕೇಳಿದ ಪ್ರಶ್ನೆಗೆ ಈಗ ಪೂರ್ತಿ ಉತ್ತರ ಬಂದಿದೆ. ಇನ್ನೂ ಏನಾದರೂ ಪ್ರಶ್ನೆ ಇದ್ದರೆ ಕೇಳಬಹುದು.

**18) ಪ್ರಶ್ನೆ :– ನೀವು ಕರ್ಮ ಗ್ರಂಥದಲ್ಲಿ ಮೂರು (3) ಅಧ್ಯಾಯಗಳು, 36 ಪಾಠಗಳು, 324 ಸಮಾಚಾರಗಳು ಇವೆಯೆಂದು ಬರೆದಿದ್ದೀರಲ್ಲ! ಅವುಗಳ ವಿವರವೇನೊ ಹೇಳಿರಿ?**

**ಉ॥** ಇದಕ್ಕು ಮೊದಲು ಮೂರು ಆತ್ಮಗಳನ್ನು ಕುರಿತು ಹೇಳಿಕೊಂಡಿದ್ದೇವಲ್ಲವೆ! ಅದರಲ್ಲಿ ಇತ್ತ ಜೀವಾತ್ಮ ಅಲ್ಲದೆ ಅತ್ತ ಪರಮಾತ್ಮ ಅಲ್ಲದೆ ಮಧ್ಯದಲ್ಲಿರುವ ಆತ್ಮ ಎಲ್ಲರನ್ನು ನಡೆಸುತ್ತಿದೆಯೆಂದು ಹೇಳಿದ್ದೇವೆ. ಆದರೆ ತನ್ನನ್ನು ಆತ್ಮ ನಡೆಸುತ್ತಿದೆಂದು ತಿಳಿಯದ ಜೀವಾತ್ಮ ತಾನೇ ಎಲ್ಲಾ ಮಾಡುತ್ತಿದ್ದೇನೆಂದು ಅಂದುಕೊಳ್ಳುವುದರಿಂದ ನಡೆದ ಒಳ್ಳೆಯಕೆಲಸಕ್ಕಾಗಲಿ, ಕೆಟ್ಟಕೆಲಸಕ್ಕಾಗಲಿ ಅವನೇ ಕಾರಣವಾಗುತ್ತಿದ್ದಾನೆ. ಅದರಲ್ಲಿ ಬಂದಿರುವ ಕರ್ಮವನ್ನು ಶರೀರದಲ್ಲಿ

ಪರಿಶೀಲಕನಾಗಿ, ಪರ್ಯವೇಕ್ಷಕನಾಗಿರುವ ಆತ್ಮ ಜೀವಿಯ ಖಾತೆಯಲ್ಲಿ ಬರೆಯುತ್ತಿದೆ. ಹಾಗೆ ಬರೆದಿಟ್ಟಿರುವ ಪತ್ರಗಳೆಲ್ಲ ಮೂರುನೂರ ಇಪ್ಪತ್ತನಾಲ್ಕು (324) ಇವೆ. ಒಂದು ಗುಂಪಿಗೆ ಸಂಬಂಧಿಸಿದ ಕರ್ಮಗಳೆಲ್ಲವನ್ನು ಒಂದು ಪತ್ರದಲ್ಲಿ ಬರೆಯುವುದು ನಡೆಯುತ್ತಿದೆ. ಆ ವಿಧವಾಗಿ ವಿಭಜಿಸಲಾದ ಕರ್ಮಗಳು 324 ಇರುವುದರಿಂದ, ಮೂರು ನೂರ ಇಪ್ಪತ್ತನಾಲ್ಕು ಪತ್ರಗಳಲ್ಲಿ ಅವುಗಳ ಸಮಾಚಾರಗಳು ಬರೆಯುವುದು ನಡೆಯುತ್ತಿದೆ. ಇದನ್ನೆಲ್ಲಾ ವಿವರವಾಗಿ ಹೇಳಿದರೆ ಹೀಗೆ ಇದೆ ನೋಡಿರಿ. ಪ್ರತಿ ಮನುಷ್ಯನಿಂದ ಒಳ್ಳೆಯ ಕೆಟ್ಟಕೆಲಸಗಳನ್ನು ಮಾಡಿಸುವವನು ಶರೀರದಲ್ಲಿರುವ ಆತ್ಮವೆಂದು ಹೇಳಿಕೊಂಡಿದ್ದೇವಲ್ಲವೆ! ಆತ್ಮ ಮಾಡಿಸುತ್ತಿದೆಯೆಂದು ತಿಳಿಯದವರೆಲ್ಲಾ ಪ್ರತಿ ಕೆಲಸವನ್ನು ತಾವೇ ಮಾಡಿದಂತೆ ಭ್ರಮಿಸುತ್ತಿದ್ದಾರೆ. ಹಾಗೆ ಅಂದುಕೊಳ್ಳುವುದರಿಂದ ಪಾಪಪುಣ್ಯಗಳಿಗೆ ನಾನು ಮಾಡಿದ್ದೇನೆಂದು ಅಂದುಕೊಳ್ಳುವ ಮನುಷ್ಯನೇ ಕಾರಣನಾಗುತ್ತಿದ್ದಾನೆ. ಆದ್ದರಿಂದ ಅವನಿಗೋಸ್ಕರ ನಿಗಧಿಸಲ್ಪಟ್ಟ ಕರ್ಮಗ್ರಂಥದಲ್ಲಿ ಕರ್ಮವನ್ನು ಆತ್ಮವೆ ದಾಖಲಾತಿ ಮಾಡುತ್ತಿದೆ. ಹಾಗೆ ಬರೆಯಲಾದ ಕರ್ಮಗಳ ದಾಖಲಾತಿ ಪುಸಕ್ತವನ್ನು ಖುರಾನ್ ಗ್ರಂಥದಲ್ಲಿ 83ನೇ ಸುರಾದಲ್ಲಿ 7, 8, 9 ವಾಕ್ಯಗಳಲ್ಲಿ **"ಸಿಜ್ಜೀನು" ಅಂದಿದ್ದಾರೆ. "(7) ನಿಶ್ಚಯವಾಗಿ ಪಾಪಾತ್ಮರ ರಿಕಾರ್ಡು ಸಿಜ್ಜೀನಿನಲ್ಲಿ ಇರುತ್ತದೆ. (8) ಸಿಜ್ಜೀನ್ ಅಂದರೆ ಏನೊ ನಿನಗೇನು ತಿಳಿದಿದೆ. (9) ಅದು ಒಂದು ಲಿಖಿತ ಪೂರ್ವಕದಸ್ತ್ರಂ."** ಎಂದು ಇದೆ. ದಸ್ತ್ರಂ ಎಂದರೆ ಬರೆಯಲ್ಪಟ್ಟ ಗ್ರಂಥವೆಂದು ಅರ್ಥ. ಬರೆಯುವವನು ಆತ್ಮ ಆದ್ದರಿಂದ ಆತ್ಮ ಮನುಷ್ಯನ ಭಾವವನ್ನನುಸರಿಸಿ ಬರೆಯುತ್ತಿದೆ. ಮನುಷ್ಯನಿಗಿರುವ ಭಾವನೆಗಳು ತಿಳಿಯಬೇಕೆಂದರೆ ಮನುಷ್ಯನ ಶರೀರದಲ್ಲಿರುವ ಕರ್ಮಚಕ್ರದ ಕೆಳಗಿರುವ ಗುಣಚಕ್ರದೊಳಗೆ ಹೋಗಿ ನೋಡಬೇಕು. ಗುಣಚಕ್ರದಲ್ಲಿಯೇ ಜೀವಾತ್ಮ ಎನ್ನುವವನು (ನೀನು) ಇರುತ್ತಾನೆ. ಅಲ್ಲಿರುವ ಗುಣಗಳನ್ನನುಸರಿಸಿ ಜೀವಿಯು ಗುಣಭಾವವನ್ನು ಹೊಂದುತ್ತಿರುತ್ತಾನೆ. ಗುಣಚಕ್ರ ಮೂರು ಭಾಗಗಳಾಗಿ ಇದೆ. ಮೂರು ಭಾಗಗಳಿಗು ಮೂರು ಹೆಸರುಗಳು ಇವೆ. ಒಂದು ಭಾಗದ ಹೆಸರು ತಾಮಸ, ಎರಡನೆಯದರ ಹೆಸರು ರಾಜಸ. ಮೂರನೆಯದರ ಹೆಸರು ಸಾತ್ವಿಕ. ಈ ಮೂರು ಭಾಗಗಳಲ್ಲಿ

ಒಂದೊಂದರಲ್ಲಿ 12 ಗುಣಗಳಿರುತ್ತವೆ. ಅದರಲ್ಲಿ ಆರು ಒಳ್ಳೆಯ ಗುಣಗಳು, ಆರು ಕೆಟ್ಟ ಗುಣಗಳು ಇವೆ. ಆರು ಕೆಟ್ಟ ಗುಣಗಳ ಹೆಸರುಗಳನ್ನು ಕ್ರಮವಾಗಿ ಹೇಳಿದರೆ ಕಾಮ, ಕ್ರೋಧ, ಲೋಭ, ಮೋಹ, ಮಧ, ಮತ್ಸರ ಎನ್ನುವವು. ಹಾಗೆ ಆರು ಒಳ್ಳೆಯ ಗುಣಗಳ ಹೆಸರುಗಳನ್ನು ಹೇಳಿದರೆ, ಅವು ಕೆಟ್ಟಗುಣಗಳಿಗೆ ವಿರುದ್ಧ ಭಾವಗಳಿರುವ ವಾಗಿ ತಿಳಿಯುತ್ತಿವೆ. ಅವು ಕ್ರಮವಾಗಿ ದಾನ, ದಯ, ಔಧಾರ್ಯ, ವೈರಾಗ್ಯ, ವಿನಯ, ಪ್ರೇಮಗಳಾಗಿ ಇವೆ.

ಒಂದು ಗುಣಭಾಗದಲ್ಲಿ ಆರು ಕೆಟ್ಟ ಗುಣಗಳು, ಆರು ಒಳ್ಳೆಯ ಗುಣಗಳು ಸೇರಿ ಒಟ್ಟಾರೆ 12 ಗುಣಗಳು ಇವೆ. ಒಂದು ಭಾಗದಲ್ಲಿ ಹನ್ನೆರಡು ಗುಣಗಳ ಪ್ರಕಾರ, ಮೂರು ಗುಣಭಾಗಗಳಲ್ಲಿ 36 ಗುಣಗಳು ಇವೆ. ಜೀವಿಯು ಮೂರು ಗುಣಭಾಗಳಲ್ಲಿಯೂ ತಿರುಗುತ್ತಿರುತ್ತಾನೆ, ಆದ್ದರಿಂದ 36 ಗುಣಭಾಗಗಳನ್ನು ಜೀವಿಯು ಹೊಂದುತ್ತಿರುತ್ತಾನೆ. ಒಂದೊಂದು ಗುಣಭಾಗದಲ್ಲಿ ಹನ್ನೆರಡು ಗುಣಗಳಿವೆ ಅಲ್ಲವೆ! ಅವು ಒಂದೊಂದು ಒಂಭತ್ತು ಭಾಗಗಳಾಗಿ ವಿಭಜಿಸಲ್ಪಟ್ಟಿವೆ. ಆಸೆ (ಕಾಮ) ಎಂಬ ಗುಣ ಒಂಭತ್ತು ಆಸೆಗಳಾಗಿ ಇದೆ. ಮೊದಲು ದೊಡ್ಡದು ನಂತರ ಚಿಕ್ಕದು, ಆ ನಂತರ ಅದಕ್ಕಿಂತ ಚಿಕ್ಕದಾಗಿದ್ದು ಪ್ರತಿ ಗುಣವು ಒಂಭತ್ತು ವಿಧಗಳ ಪರಿಮಾಣಗಳಲ್ಲಿ ಇದೆ. ಆ ವಿಧವಾಗಿ ಹನ್ನೆರಡು ಗುಣಗಳು 108 ಸೀಳಿಕೆ ಗುಣಗಳಾಗಿ ಇವೆ. ಒಂದು ಗುಣಭಾಗದಲ್ಲಿ 108 ಚಿಕ್ಕ ದೊಡ್ಡ ಗುಣಗಳಿರುವಾಗ, ಮೂರು ಭಾಗಗಳಲ್ಲಿ ಒಟ್ಟಾರೆ 324 ಗುಣಗಳು ಇವೆ. ಮೊದಲು ಕರ್ಮಚಕ್ರ ಮೂರು ಭಾಗಗಳಾಗಿ ಇರುವುದರಿಂದ ಕರ್ಮಗ್ರಂಥ ಮೂರು ಅಧ್ಯಾಯಗಳಾಗಿ ಇದೆಯೆಂದು ಹೇಳಿದ್ದೇವೆ. ಹಾಗೆಯೇ ಒಂದೊಂದು ಭಾಗದಲ್ಲಿ ಹನ್ನೆರಡು ಗುಣಗಳ ಪ್ರಕಾರ, ಮೂರು ಭಾಗಗಳಲ್ಲಿ 36 ಗುಣಗಳಿರುವುದರಿಂದ ಕರ್ಮ ಗ್ರಂಥದಲ್ಲಿ 36 ಪಾಠಗಳಿವೆಯೆಂದು ಹೇಳಿದ್ದೇವೆ. ಒಂದೊಂದು ಗುಣ ಒಂಬತ್ತು ಭಾಗಗಳಾಗಿ ವಿಭಜಿಸಲ್ಪಟ್ಟಿರುವು ದರಿಂದ ಒಂದೊಂದು ಭಾಗದಲ್ಲಿ 108 ಗುಣಗಳಿರುವುದರಿಂದ, ಗುಣಚಕ್ರದಲ್ಲಿನ ಮೂರು ಗುಣಭಾಗಗಳಲ್ಲಿ ಒಟ್ಟಾರೆ 324 ಗುಣಗಳಿರುವುದರಿಂದ, ಕರ್ಮಗ್ರಂಥದಲ್ಲಿ 324 ಸಮಾಚಾರಗಳಿವೆಯೆಂದು ಹೇಳಲಾಗಿದೆ.

ಪ್ರತಿ ಮನುಷ್ಯ ತನ್ನ ಗುಣಚಕ್ರದಲ್ಲಿನ ಗುಣಗಳ ಪ್ರಕಾರ ಭಾವಗಳನ್ನು ಹೊಂದುತ್ತಿದ್ದಾನೆ. ಆದ ಕಾರಣ ಮನುಷ್ಯ ಹೊಂದುವ 324 ಭಾವಗಳ ಪ್ರಕಾರ ಬರುವ 324 ಕರ್ಮಗಳನ್ನು, ಶರೀರದಲ್ಲಿದ್ದು ನಡೆಸುವ ಆತ್ಮ ದಾಖಲಾತಿ ಮಾಡುತ್ತಿದೆ. ಆದ್ದರಿಂದ ಕರ್ಮದಸ್ತ್ರದಲ್ಲಿ 324 ಸಮಾಚಾರಗಳು 36 ಪಾಠಗಳ ರೂಪದಲ್ಲಿ ಇವೆಯೆಂದು ಹೇಳಬಹುದು. 36 ಪಾಠಗಳು ತಾಮಸ, ರಾಜಸ, ಸಾತ್ತ್ವಿಕವೆಂಬ ಮೂರು ಅಧ್ಯಾಯಗಳಾಗಿ ಇವೆಯೆಂದು ಹೇಳಬಹುದು. ಮನುಷ್ಯ ಹೊಂದುವ ಭಾವಗಳಿಗೆ ತಕ್ಕಹಾಗೆ ಪಾಪಪುಣ್ಯಗಳನ್ನು ಪರ್ಯವೇಕ್ಷಕನಾದ ಆತ್ಮ ಕರ್ಮಗಳ ರೂಪದಲ್ಲಿ ಬರೆಯುತ್ತಿದ್ದಾನೆ. ಮನುಷ್ಯನಿಗಿರುವ ಪ್ರತಿ ಭಾವಕ್ಕು ಒಂದು ಕರ್ಮ ತಯಾರಾಗುತ್ತಿದೆ. ಪ್ರತಿ ಮನುಷ್ಯನಲ್ಲಿಯು 162 ಒಳ್ಳೆಯ ಗುಣಭಾವಗಳು, 162 ಕೆಟ್ಟ ಗುಣ ಭಾವಗಳಿರುವುದರಿಂದ ಕರ್ಮಗಳು ಸಹಾ ಅದೇ ಲೆಕ್ಕಪ್ರಕಾರ ಬರೆಯಲ್ಪಡುತ್ತಿವೆ. ಕರ್ಮಗ್ರಂಥ ಎಷ್ಟು ಓದಿದರೂ ಮುಗಿಯುವಂತದ್ದಲ್ಲ. ಹಾಗೆ ಅದರಿಂದ ಎಷ್ಟು ಪೇಜಿಗಳನ್ನು ತೆಗೆದುಹಾಕಿದರೂ ಪೇಜಿಗಳು ಕಡಿಮೆಯಾಗುವುದಿಲ್ಲ. ಆದ್ದರಿಂದ ಈ ಕರ್ಮಗ್ರಂಥದ ಪೂರ್ತಿ ವಿಷಯ ಬಹಳಜನರಿಗೆ ತಿಳಿಯದೆಂದು ಹೇಳಬಹುದು. ಕರ್ಮ ಹೇಗೆ ತಯಾರಾಗುತ್ತಿದೆಯೊ ತಿಳಿಯದಿರುವಾಗ, ಕರ್ಮ ಹೇಗೆ ಅನುಭವಿ ಸಲ್ಪಡುತ್ತಿದೆಯೊ ಸಹಾ ತಿಳಿಯದು. ಕರ್ಮ ಹೇಗೆ ಕೈಗೂಡುತ್ತಿರುವುದು, ಅದನ್ನು ಯಾರು ದಾಖಲಾತಿ ಮಾಡುತ್ತಿರುವುದು ತಿಳಿಯದೆಹೋದರೆ, ಹೇಗೆ ಅನುಭವರೂಪಕ್ಕೆ ಬರುತ್ತಿದೆಯೊ, ಯಾವಾಗ ಬರುತ್ತಿದೆಯೊ ಎಷ್ಟುಕಾಲ ಅನುಭವಿಸಬೇಕಾಗಿರುತ್ತದೊ ಪೂರ್ತಿ ತಿಳಿಯದಂತೆ ಹೋಗುತ್ತಿದೆ. ಕರ್ಮ ಸಂಭವಿಸುವ ವಿಧಾನ ಬಹುಶಃ ಎಲ್ಲಾ ಮತಗಳಲ್ಲಿಯೂ ತಿಳಿಯದಹಾಗೆ ಹೋಗಿದೆಯೆಂದು ಹೇಳಬೇಕು. ಹಾಗೆಯೇ ಕರ್ಮವನ್ನು ಹೇಗೆ ಅನುಭವಿಸುತ್ತಿದ್ದೇವೊ, ಎಲ್ಲಿ ಅನುಭವಿಸುತ್ತಿದ್ದೇವೊ ಸಹಾ ತಿಳಿಯದಂತಾಗಿದೆ. ಆದ್ದರಿಂದ ಭಗವದ್ಗೀತೆಯಲ್ಲಿ ಕರ್ಮ ವಿಧಾನವನ್ನು ಕುರಿತು ಹೇಳಲಾಗಿದೆ. ಭಗವದ್ಗೀತೆಯಲ್ಲಿಯೇ ಅಲ್ಲದೆ ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿ ಸಹಾ ಹೇಳುವುದು ನಡೆದಿದೆ. ಆದರೂ ಕರ್ಮವಿಧಾನವನ್ನು ಅರ್ಥ ಮಾಡಿಕೊಳ್ಳದೆ,

ಅದನ್ನು ತಿಳಿಯದಹಾಗೆ ಸಂಪಾದಿಸಿಕೊಳ್ಳುತ್ತಿದ್ದೇವೆ. ಹಾಗೆ ತಿಳಿಯದಂತೆ ಅನುಭವಿಸುತ್ತಿದ್ದೇವೆ.

**19) ಪ್ರಶ್ನೆ :– ದೇವರು ಹೇಳಿದ ಅಥವಾ ದೇವರು ತಿಳಿಸಿದ ಮೂರು ಗ್ರಂಥಗಳಲ್ಲಿ ಕರ್ಮವನ್ನು ಕುರಿತು ಹೇಳಿದ್ದರೆ ಸಾಮಾನ್ಯರಿಗೆ ತಿಳಿಯದಂತೆ ಹೋಗಿರಬಹುದು. ಜ್ಞಾನದಲ್ಲಿ ಎಷ್ಟೋ ಅನುಭವ ಇರುವವರಿಗೆ, ಮತ ಹಿರಿಯರಿಗೆ, ಮತ ಗುರುಗಳಿಗೆ, ಸ್ವಾಮೀಜಿಗಳಿಗೆ ಕರ್ಮ ವಿಷಯವೆಲ್ಲಾ ತಿಳಿದಿರುತ್ತದೆ ಅಲ್ಲವೆ! ಅವರಿಗು ಸಹಾ ಕರ್ಮ ವಿಧಾನ ತಿಳಿದಿಲ್ಲವೆನ್ನುತ್ತೀರಾ?**

**ಉ ॥** ಕರ್ಮ ರಹಸ್ಯ ಎಲ್ಲರಿಗೂ ತಿಳಿಯದೆಂದು ನಾನೇಕನ್ನುತ್ತೇನೆ. ಕೆಲವರು ತಿಳಿದವರಿರಬಹುದು. ಆದರೂ ಬಹಳಜನರಿಗೆ ತಿಳಿಯದೆಂದೇ ಹೇಳುತ್ತಿದ್ದೇವೆ. ಕರ್ಮ ವಿಧಾನ ತಿಳಿದಿದ್ದರೆ ಮೊದಲೇ ಅದನ್ನು ಅಂಟಿಸಿಕೊಳ್ಳದೆ ದಾಖಲಾಗದಂತೆ ನೋಡಿಕೊಳ್ಳುತ್ತಾರೆ. ಒಂದುವೇಳೆ ಮೊದಲು ದಾಖಲಾದ ಕರ್ಮವನ್ನು ಸಹಾ ಅನುಭವಿಸದೆ ತಪ್ಪಿಸಿಕೊಳ್ಳುತ್ತಿದ್ದರು. ಈದಿನ ಕರ್ಮವನ್ನು ಅಂಟಿಸಿಕೊಳ್ಳದೆ ಇರುವವರಿಗಿಂತ, ಕರ್ಮವನ್ನು ಅಂಟಿಸಿಕೊಳ್ಳುವವರೇ ಹೆಚ್ಚಾಗಿ ಕಾಣಿಸುತ್ತಿದ್ದಾರೆ. ಕರ್ಮವನ್ನು ತಗುಲಿಸಿಕೊಂಡ ನಂತರ ಸಹಾ ಅದನ್ನು ಕುರಿತ ಜ್ಞಾನ ತಿಳಿಯದೆಹೋದರೆ, ಕರ್ಮ ಅನುಭವದಿಂದ ಯಾರಾಗಲಿ ತಪ್ಪಿಸಿಕೊಳ್ಳಲಾರರು. ಕರ್ಮವನ್ನು ಪೂಜೆಗಳು, ಶಾಂತಿಗಳು ಇಲ್ಲದಂತೆ ಮಾಡಲಾರವು. ಜ್ಞಾನ ತಿಳಿಯದ ಎಂತಹವರಾದರೂ ಕರ್ಮದ ಮುಂದೆ ಚಿಕ್ಕವರೆ. ಆದ್ದರಿಂದ ಯಾವ ಮಾನವನೂ ಅದರ ಅನುಭವದಿಂದ ತಪ್ಪಿಸಿಕೊಳ್ಳಲಾರನು.

**20) ಪ್ರಶ್ನೆ :– ದೇವರು ಹೇಳಿದ ಜ್ಞಾನವೂ, ಕರ್ಮ ವಿಧಾನವೂ ಸುಲಭವಾಗಿರುವಾಗ, ಎಲ್ಲರಿಗು ಅರ್ಥವಾಗುವಂತೆ ದೇವರು ಹೇಳಿದಾಗ, ಎಲ್ಲರಿಗೂ ಏಕೆ ಅರ್ಥವಾಗಲಿಲ್ಲ ವೆನ್ನುತ್ತೀರ? ಎಲ್ಲಿ ಲೋಪವಿದೆಯೆನ್ನುತ್ತೀರಾ?**

**ಉ ॥** ಲೋಪವೆಲ್ಲಾ ಅರ್ಥ ಮಾಡಿಕೊಳ್ಳುವುದರಲ್ಲಿಯೇ ಇದೆ. ಮನುಷ್ಯ ಮಾಡುವ ಪ್ರತಿ ಚಿಕ್ಕ ತಪ್ಪನ್ನು ಪಾಪರೂಪದಲ್ಲಿ, ಪ್ರತಿ ಚಿಕ್ಕ ಒಳ್ಳೆಯದನ್ನು

ಪುಣ್ಯ ರೂಪದಲ್ಲಿ ಲಿಖಿಸಿಕೊಳ್ಳುವವರಿದ್ದಾರೆಂದು ತಿಳಿದುಕೊಳ್ಳುವವರೆಗು ಎಂತಹ ಲೋಪವಿಲ್ಲ. ಆದರೆ ದಾಖಲಾತಿ ಮಾಡಲಾದ ಕರ್ಮವನ್ನು ಎಲ್ಲಿ, ಯಾವಾಗ ಅನುಭವಿಸುತ್ತಿದ್ದೇವೆಂದು ತಿಳಿಯುವುದರಲ್ಲಿ ಪೂರ್ತಿಯಾಗಿ ತಪ್ಪುದಾರಿ ಹಿಡಿದಿದ್ದಾರೆ. ಸತ್ತುಹೋದ ಮನುಷ್ಯ ಸಮಾಧಿಯಿಂದ ಎಬ್ಬಿಸಲ್ಪಡುತ್ತಾನೆ, ಆಗ ಅವನು ಮಾಡಿಕೊಂಡ ಕರ್ಮಗಳಿಗೆ (ಪಾಪಗಳಿಗೆ) ಶಿಕ್ಷೆ ಹಾಕಲ್ಪಡುತ್ತದೆ ಎಂದು ದೇವರು ತಿಳಿಸಿದ ಜ್ಞಾನವನ್ನು ಅವಗಾಹನೆ ಲೋಪದಿಂದ ತಪ್ಪಾಗಿ ಅರ್ಥಮಾಡಿಕೊಂಡು ಉಳಿದವರಿಗೆ ತಮಗೆ ಅರ್ಥವಾದಂತೆ ಹೇಳುವುದರಿಂದ ಎಲ್ಲರೂ ತಪ್ಪುದಾರಿಯೊಳಗೆ ಹೋದಂತಾಗಿದೆ. ಖುರ್‌ಆನ್ ಗ್ರಂಥದಲ್ಲಿ 23ನೇ ಸೂರಾದಲ್ಲಿ 15, 16 ಆಯತ್‌ನಲ್ಲಿ ಹೀಗೆ ಇದೆ. **(15) ಸ್ವಲ್ಪ ಕಾಲದ ನಂತರ ನೀವು ನಿಶ್ಚಯವಾಗಿ ಮರಣಿಸುತ್ತೀರ. (16) ಆದ ನಂತರ ನಿಶ್ಚಯವಾಗಿ ನೀವು ಪುನರುತ್ಥಾನ ದಿನದಂದು ಪುನಃ ಎಬ್ಬಿಸಲ್ಪಡುತ್ತೀರ."** ಎಂದು ಇದೆ. ಈ ವಿಷಯವನ್ನು ಖುರ್‌ಆನ್ ಗ್ರಂಥದಲ್ಲಿ ಬಹಳಸಲ ಹೇಳಲಾಗಿದೆ. 83ನೇ ಸುರಾದಲ್ಲಿ ಆರನೆ (6) ಆಯತ್‌ನಲ್ಲಿ ಆ ದಿನ ಜನರೆಲ್ಲ ತಮ್ಮ ಪ್ರಭು ಸಮಕ್ಷಮದಲ್ಲಿ ನಿಲ್ಲುತ್ತಾರೆ." ಇದಕ್ಕಿಂತ ಮೊದಲು 5ನೇ ಆಯತ್‌ನಲ್ಲಿ "ಒಂದು ಮಹಾ ದಿನದಂದು" ಎಂದು ಇದೆ. ಈ ಎರಡು ವಾಕ್ಯಗಳಲ್ಲಿ ದೃಶ್ಯವೆಲ್ಲಾ ಬದಲಾಗಿ ಹೋಗಿದೆ. ಈ ವಾಕ್ಯಗಳಲ್ಲಿ ದೊಡ್ಡ ಸಮಸ್ಯೆ ಇಲ್ಲದಿದ್ದರೂ, ಅರ್ಥವಾಗದ ವಿಧಾನ ಏನು ಇಲ್ಲದಿದ್ದರೂ, ಮರಣಿಸಿದವರು ಪುನಃ ಪುನರುತ್ಥಾನ ದಿನದಂದು ಎಬ್ಬಿಸಲ್ಪಡುತ್ತಾರೆ ಎಂದು 23ನೇ ಸುರಾ 15, 16 ವಾಕ್ಯಗಳಲ್ಲಿದ್ದರೂ, ದೇವರು ಹೇಳಿದ ಜ್ಞಾನಮಾರ್ಗವನ್ನು ಬಿಟ್ಟು ಅಜ್ಞಾನ ಮಾರ್ಗದೊಳಗೆ ಹೋಗಿ ಬೇರೆ ಅರ್ಥಮಾಡಿಕೊಳ್ಳುವುದು ನಡೆದಿದೆ. ಬಹಳಜನರಿಗೆ ಅರ್ಥವಾದ ವಿಧಾನವನ್ನು ಈಗ ನೋಡೋಣ.

ಮನುಷ್ಯ ಮರಣಿಸಿದ ನಂತರ ಭೂಮಿಯಲ್ಲಿ ಹೂತಿಡುವುದು ನಡೆಯುತ್ತದೆ. ಹಾಗೆ ಪ್ರಪಂಚ ಹುಟ್ಟಿದಾಗಿನಿಂದ ಮರಣಿಸಿದವರನ್ನು ಹೂತಿಡುವುದು ನಡೆಯುತ್ತಿದೆ. ಹೂತಿಟ್ಟವರೆಲ್ಲಾ ಅವರ ಸಮಾಧಿಗಳಲ್ಲಿ

(ಗೋರಿಗಳಲ್ಲಿ) ಹಾಗೆಯೇ ಇರುತ್ತಾರೆಂದು ಮುಸ್ಲಿಮ್, ಕ್ರೈಸ್ತವ ಸಮಾಜಗಳಲ್ಲಿ ಅಂದುಕೊಳ್ಳುವುದು ನಡೆಯುತ್ತದೆ. ಪುನರುತ್ಥಾನ ದಿನದಂದು ಅವರೆಲ್ಲರು ದೇವರ ಮುಂದೆ ಎಬ್ಬಿಸಿ ನಿಲ್ಲಿಸಲ್ಪಡುತ್ತಾರೆಂದು, ಆಗ ಅವರು ಮಾಡಿಕೊಂಡ ಕರ್ಮ ಲಿಸ್ಟ್(ಪಟ್ಟಿ)ನ್ನು ನೋಡಿ ದೇವರು ಅವರಿಗೆ ಸ್ವರ್ಗವೊ ಅಥವಾ ನರಕವೊ ಕೊಡುತ್ತಾನೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಆದರೆ ಇಲ್ಲಿ ಸಮಾಧಿಯಿಂದ ಎಬ್ಬಿಸುವುದೆಂದರೆ ಏನು ಎಂದು ತಿಳಿಯದೆ, ಸಮಾಧಿಯನ್ನು ಭೂಮಿಯಲ್ಲಿರುವ ಕುಣಿಯಾಗಿ ಲೆಕ್ಕಿಸಿಕೊಳ್ಳುವುದು ಪೂರ್ತಿ ತಪ್ಪಾಗಿದೆ. ಮರಣಿಸಿದಾಗ ಅವನ ಶರೀರವನ್ನು ಹೂತಿಡುತ್ತಿದ್ದೇವೆ ಹೊರತು ಹೋದವನನ್ನು(ಶರೀರದಿಂದ ಹೋದವನನ್ನು) ಹೂತಿಡುವುದು ಇಲ್ಲವಲ್ಲ! ಶರೀರದಲ್ಲಿ ಜೀವಿಸುವ ಜೀವಿಯು ಬೇರೆ, ಶರೀರ ಬೇರೆ. ಜೀವಿಯು ಶರೀರವನ್ನು ಬಿಟ್ಟುಹೋದರೆ ಮರಣ ಆಗುತ್ತದೆ. ಶರೀರದಲ್ಲಿ ಸೇರಿದರೆ ಜನನ ಆಗುತ್ತದೆ. ಜೀವಿಯು ಹುಟ್ಟುವುದಕ್ಕೆ ಹೊಸ ಶರೀರ ಅಗತ್ಯ. ಮರಣಿಸಿದವನನ್ನು ಶರೀರದಿಂದ ಎಬ್ಬಿಸುತ್ತಾನೆಂದು ಅಂದರೆ, ಹೊಸ ಶರೀರವೆಂದು ತಿಳಿಯದೆ ಹಳೆ ಶರೀರದಿಂದ ಎಂದು ಅಂದುಕೊಳ್ಳುವುದು ಪೂರ್ತಿ ತಪ್ಪಾಗುತ್ತದೆ. ಮನುಷ್ಯ ಮರಣಿಸಿದ ತಕ್ಷಣ ಅವನ ಪಾಪಪುಣ್ಯಗಳಿಗೆ ತಕ್ಕಹಾಗೆ ಎರಡನೆ ಜನ್ಮಕೊಟ್ಟು, ಭೂಮಿಮೇಲೆಯೇ ದೇವರು ಹುಟ್ಟಿಸುತ್ತಿದ್ದಾನೆ ಹೊರತು ಮತ್ತೆ ಯಾವುದೋ ಲೋಕಕ್ಕೆ ಕಳಿಸುತ್ತಿಲ್ಲ. ಯಾವನು ಮಾಡಿಕೊಂಡ ಕರ್ಮಪತ್ರವನ್ನು ಅನುಸರಿಸಿ ಅವನು ಸ್ವರ್ಗವನ್ನು, ನರಕವನ್ನು ಎರಡನ್ನು ಭೂಮಿಮೇಲೆ ಪ್ರತ್ಯಕ್ಷವಾಗಿ ಅನುಭವಿಸುತ್ತಿದ್ದಾನೆ. ದೇವರು ಹೇಳಿದ ಸ್ವರ್ಗ, ನರಕ ಎರಡೂ ಇಲ್ಲಿಯೇ ಇವೆ.

ಪುನರುತ್ಥಾನ ದಿನ ಅಂದರೆ ಸತ್ತುಹೋಗಿ ಹುಟ್ಟುವ ದಿನವೆಂದು ಅರ್ಥ. ಮರಣಿಸಿದ ನಂತರ ತಕ್ಷಣವೇ ಪ್ರತಿಯೊಬ್ಬನು ಹುಟ್ಟುತ್ತಿದ್ದಾನೆ. ಸತ್ತುಹೋದ ಕ್ಷಣದಲ್ಲಿಯೇ ಮಾನವನು ಮಾಡಿಕೊಂಡ ಕರ್ಮ ಪ್ರಾರಬ್ಧವಾಗಿ ಬದಲಾಗಿ ಅವನ ಹುಟ್ಟುವಿಕೆಗೆ ಕಾರಣವಾಗುತ್ತಿದೆ. ಮರಣಿಸಿದವರೆಲ್ಲರೂ ಅವರ ಕರ್ಮ ನಿರ್ಮಾಣದ ಪ್ರಕಾರ, ತಮ್ಮ ಹಿಂದಿರುವ ಪರ್ಯವೇಕ್ಷಕನಾದ

ಆತ್ಮ ಜನ್ಮವನ್ನು ನಿರ್ಣಯಿಸಿದಾಗ, ದೇವರು ಸಾಕ್ಷಿಯಾಗಿ ನೋಡುತ್ತಿರುವಾಗ, ಮನುಷ್ಯ ತನ್ನ ಕರ್ಮ ಪ್ರಕಾರ ಸುಖದುಃಖಗಳನ್ನು ಅನುಭವಿಸುವುದಕ್ಕೆ ಹುಟ್ಟುತ್ತಿದ್ದಾನೆ. ಮನುಷ್ಯ ಮಾಡಿಕೊಂಡ ಪುಣ್ಯದ ಪ್ರಕಾರ ದೇವರು ಸ್ವರ್ಗವನ್ನು ಇಲ್ಲಿಯೇ ತಯಾರು ಮಾಡಿ ಕೊಟ್ಟಿದ್ದಾನೆ. ಹಾಗೆ ನರಕವನ್ನು ಇಲ್ಲಿಯೇ ಇಟ್ಟಿದ್ದಾನೆ. ಪ್ರತಿ ಒಬ್ಬರೂ ಸ್ವರ್ಗವನ್ನು ಅನುಭವಿಸುವವರನ್ನು ನೋಡುತ್ತಿದ್ದೇವೆ. ನರಕವನ್ನು ಅನುಭವಿಸುವವರನ್ನು ನೋಡುತ್ತಿದ್ದೇವೆ. ನಾವು ಸುಖದುಃಖ ರೂಪದಲ್ಲಿ ಸ್ವರ್ಗ ನರಕವನ್ನು ಅನುಭವಿಸುತ್ತಿರುವವರನ್ನು ನೋಡುತ್ತಿದ್ದರೂ ಸ್ವರ್ಗ ಎಲ್ಲಿಯೋ ಇದೆಯೆಂದು, ನರಕ ಎಲ್ಲಿಯೋ ಇದೆಯೆಂದು ಅಂದುಕೊಳ್ಳುವುದು ತಪ್ಪಲ್ಲವೆ! ಪ್ರಳಯ ದಿನದಂದು ಮರಣಿಸಿದವರು ಸಮಾಧಿಗಳಿಂದ ಎಬ್ಬಿಸಲ್ಪಡುತ್ತಾರೆಂದು ದೇವರು ಹೇಳಿದರೆ, ದೇವರ ಮಾತನ್ನು ಗ್ರಹಿಸಲಾರದೆ ತಮಗಿಷ್ಟಬಂದಂತೆ ಅಂದುಕೊಳ್ಳುವುದು, ಹಾಗೆ ಹೇಳಿಕೊಳ್ಳುವು ದರಿಂದ ದೇವರ ಬೋಧನೆಯನ್ನು ತಪ್ಪುಮಾರ್ಗ ಹಿಡಿಸಿದಂತೆ ಅಲ್ಲವೆ! ಹಾಗೆ ತಪ್ಪುದಾರಿ ಹಿಡಿಸುವವರನ್ನು 2ನೇ ಸೂರಾ 59ನೇ ಆಯತ್‌ನಲ್ಲಿ ಹೇಳಿದಹಾಗೆ ದೇವರು ಶಪಿಸುತ್ತಾನೆ. ಪ್ರಳಯ ದಿನ ಅಂದರೆ ಮರಣಿಸುವ ದಿನವೆಂದು, ಸಮಾಧಿಯಿಂದ ಎಬ್ಬಿಸುವ ಪುನರುತ್ಥಾನ ದಿನ ಅಂದರೆ ತಾಯಿಗರ್ಭದಿಂದ ತಿಳಿಯದ ಸ್ಥಿತಿಯಲ್ಲಿ ಹುಟ್ಟುವದಿನವೆಂದು ತಿಳಿಯದೆ, ಎಲ್ಲೋ ಹೋಗಿ ಏನೋ ಅರ್ಥ ಮಾಡಿಕೊಂಡರೆ ದೇವರ ಜ್ಞಾನಕ್ಕೆ ದೂರವಾಗಿಹೋದಾಗೆ ಅಲ್ಲವೆ! ಸಮಾಧಿ ಸ್ಥಿತಿಯಿಂದ ಹುಟ್ಟುವವರೆಲ್ಲರನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದೇವೆ. ಹಾಗೆ ಪ್ರಳಯ ಅವನಿಗೆ ಮಾತ್ರ ಬಂದು ಅವನ ಶರೀರದಲ್ಲಿನ ಪಂಚಭೂತಗಳಿಗು (ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ) ಪ್ರಳಯ ಏರ್ಪಟ್ಟು ಶರೀರ ಮರಣಿಸುವುದು ನಿತ್ಯ ನಡೆಯುತ್ತಿರುವ ಕೆಲಸವೆ. ಸಮಾಧಿ ಅಂದರೆ ಹೊರಗಿನ ಗೋರಿಗಳನ್ನು ಹೋಲಿಸಿಕೊಂಡು ಅಸಲಾದ ಸಮಾಧಿಯನ್ನು ಮರೆತುಹೋ ಗುವುದು ತಪ್ಪು. ಹಾಗೆಯೇ ಸಾವಿನವರೆಗು, ಸಾವಿನಿಂದ ಹುಟ್ಟಿನವರೆಗು ತೆಗೆದುಕೊಂಡು ಬಂದು (ಓಡಿಸಿಕೊಂಡು ಬಂದು) ಎಲ್ಲಕಾಲದಲ್ಲಿ ನಿನ್ನಹಿಂದಿ ರುವ ಸಹವಾಸಿಯಾದ ಆತ್ಮವನ್ನು ಎಲ್ಲರೂ ಮರತೆಹೋಗುವುದು ಪೂರ್ತಿ

ಅಜ್ಞಾನವಾಗುತ್ತದೆ. ಪ್ರತಿ ಕರ್ಮವನ್ನು ನಿನ್ನ ಜೊತೆ ಇರುವ ಆತ್ಮ ಪರ್ಯವೇಕ್ಷಕನಾಗಿದ್ದು ಬರೆದುಕೊಂಡು, ನಂತರ ಜನ್ಮ ಸಮಯದಲ್ಲಿ ಪ್ರಾರಬ್ಧಕರ್ಮವಾಗಿ ಬದಲಾಯಿಸಿ ಭೂಮಿಮೇಲೆಯೇ ಸುಖದುಃಖಗಳನ್ನು ಅನುಭವಿಸುವಂತೆ ಮಾಡುತ್ತಿರುವಾಗ, ಯಾರೂ ನೋಡದ ಸ್ವರ್ಗನರಕಗಳನ್ನು ಊಹಿಸಿಕೊಂಡು, ಪ್ರತ್ಯಕ್ಷವಾಗಿ ಅನುಭವಿಸುವುದನ್ನು ಮರೆತುಹೋಗುವುದು ಅಜ್ಞಾನ ಅಲ್ಲವೆ! ಭೂಮಿಯಲ್ಲಿ ಹೂತಿಡುವ ನಿರ್ಜೀವವಾದ ಶರೀರವನ್ನು, ಜೀವವಾಗಿ ಹೋಲಿಸಿಕೊಂಡು ಅವನು ಶರೀರದಿಂದ ಪುನಃ ಎದ್ದೇಳುತ್ತಾನೆಂದು ಕೊಳ್ಳುವುದು ಅಜ್ಞಾನ ಅಲ್ಲವೆ! ಪುನರುತ್ಥಾನ ದಿನ ಮರಣಿಸಿದ ದಿನವೇ ಆಗುತ್ತಿರುವಾಗ, ಪ್ರಳಯ ದಿನದಂದು ಮತ್ತೆ ಎಬ್ಬಿಸಲ್ಪಡುತ್ತಾರೆಂದು ದೇವರು ಹೇಳಿದಾಗ, ಮರಣಿಸಿದ ದಿನದಂದೆ ಶರೀರದಿಂದ ಎಬ್ಬಿಸಲ್ಪಡುತ್ತಾರೆಂದು ಅರ್ಥ ಮಾಡಿಕೊಳ್ಳದೆ ಸೃಷ್ಟ್ಯಾದಿಯಿಂದ ಎಲ್ಲರೂ ಕುಣಿಯಲ್ಲಿ ಮಲಗಿದ್ದಾರೆಂದು ಕೊಳ್ಳುವುದು ಅಜ್ಞಾನ ಅಲ್ಲವೆ! ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಎಲ್ಲಿಯೂ ಇಲ್ಲದ ವಿಷಯವನ್ನು ಮನುಷ್ಯ ಏಕೆ ಬೇರೆ ಅರ್ಥಮಾಡಿಕೊಂಡಿದ್ದಾನೆ. ದೇವರು ಹೇಳಿದ ಭಾವವನ್ನು ಬಿಟ್ಟು ಪ್ರತ್ಯಕ್ಷ ನರಕವನ್ನು ಪರೋಕ್ಷ ಲೋಕದಲ್ಲಿ ಇದೆಯೆಂದುಕೊಳ್ಳುವುದು ಅಜ್ಞಾನ ಅಲ್ಲವೆ! ನರಕ ಪ್ರತ್ಯಕ್ಷವಾಗಿ ಇದೆಯೆಂಬುವುದಕ್ಕೆ ಆಧಾರವಾಗಿ ಖುರಾಆನ್ ಗ್ರಂಥದಲ್ಲಿ 2ನೇ ಸೂರಾ 165ನೇ ಆಯತ್‌ನ್ನು ನೋಡಿರಿ. **"ಸರ್ವಶಕ್ತಿಗಳು, ಸರ್ವಾಧಿಕಾರಗಳು ಅಲ್ಲಾಹ್(ದೇವರ) ಕೈಯಲ್ಲಿವೆ ಎಂದು, ಇನ್ನೂ ಶಿಕ್ಷಿಸುವುದರಲ್ಲಿ ಸಹಾ ಆತನು ಕಠಿಣನೆಂದು, ಈ ದುರ್ಮಾರ್ಗರಿಗೆ ಮುನ್ಮುಂದೆ ಘೋರಶಿಕ್ಷೆಯನ್ನು ಪ್ರತ್ಯಕ್ಷವಾಗಿ ನೋಡಿದ ನಂತರ ತಿಳಿದುಕೊಳ್ಳುವ ಬದುಲು ಈಗಲೇ ತಿಳಿದುಕೊಂಡರೆ ಎಷ್ಟು ಚೆನ್ನಾಗಿರುತ್ತದೆ."** ಇಲ್ಲಿ ದೇವರು ಮನುಷ್ಯರು ಶಿಕ್ಷೆಯನ್ನು ಪ್ರತ್ಯಕ್ಷವಾಗಿ ನೋಡದಮೊದಲೆ ದೇವರ ಜ್ಞಾನ ಈಗಲೇ ತಿಳಿದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಅಂದಿದ್ದೀರಲ್ಲ! ಈ ಮಾತಿನಿಂದ ನರಕ ಶಿಕ್ಷೆರೂಪದಲ್ಲಿ, ಬಾಧೆಗಳರೂಪದಲ್ಲಿ ಇರುತ್ತದೆಂದು ಅರ್ಥವಾಗುತ್ತಿದೆ ಅಲ್ಲವೆ! ಮನುಷ್ಯರು ಮಾಡಿಕೊಂಡ ಕರ್ಮಗಳು ಕರ್ಮಪತ್ರದಲ್ಲಿ ಲಿಖಿಸಲ್ಪಟ್ಟು 324 ಪೇಜಿಗಳ

ದೊಡ್ಡ ಗ್ರಂಥವಾಗಿದೆ. ಆ ಗ್ರಂಥದಲ್ಲಿನ ಕರ್ಮಗಳ ಪ್ರಕಾರ ಮನುಷ್ಯ ಭೂಮಿಮೇಲೆ ಪ್ರತ್ಯಕ್ಷ ನರಕವನ್ನು ಅನುಭವಿಸುತ್ತಿದ್ದಾನೆ. ಆದರೂ ಕರ್ಮವೆಂದರೆ ಏನು? ಕರ್ಮವನ್ನು ಯಾರು ಬರೆಯುತ್ತಿದ್ದಾರೆ? ತನ್ನನ್ನು ಕರ್ಮ ಪ್ರಕಾರ ಶಿಕ್ಷೆಗಳಿಗೆ ಗುರಿಮಾಡುವವನು ಯಾರು? ಎಂದು ತಿಳಿಯದೆ ಇರುವುದು ಈ ಜನ್ಮವೇ ಎಂದು, ನಂತರ ಜನ್ಮ ಇಲ್ಲವೆಂದು, ಪ್ರಳಯದವರೆಗು ಸಮಾಧಿಗಳಲ್ಲಿ ಮಲಗಿರುತ್ತೇವೆಂದು, ಪ್ರಳಯ ದಿನದಂದು ಎ ಬ್ಬಿಸಲ್ಪಡುತ್ತೇವೆಂದು ಹೇಳಿಕೊಳ್ಳುವುದು ಸಮಂಜಸವಾ? ದೇವರು ಎಲ್ಲಿಯಾದರೂ, ನೀನಂದು ಕೊಂಡಂತೆ ಹೇಳಿದ್ದಾನಾ? ಅಸಲು ಪ್ರಳಯಕಾಲ ಯಾವಾಗಲೊ ಬರುತ್ತದೆಂದು ಅಂದುಕೊಳ್ಳುತ್ತಾ ಕಾಲ ವೃಥಾ ಕಳೆಯುವುದಕ್ಕಿಂತ ಮನುಷ್ಯ ಮರಣದಲ್ಲಿ ನಲುಗಿಹೋಗುವ ದಿನವೇ ಪ್ರಳಯವೆಂದು ಮತ್ತೆ ಜನ್ನಿಸುವುದೆ ಪುನರುತ್ಥಾನ ದಿನವೆಂದು ಏಕೆ ಅಂದುಕೊಳ್ಳಬಾರದು? ಸಾವುಹುಟ್ಟುಗಳಿಗೆ ಎಲ್ಲದಕ್ಕು ಕಾರಣ ನಮ್ಮ ಕರ್ಮಬರಹವೇ ಎಂದು ಏಕೆ ಅಂದುಕೊಳ್ಳಬಾರದು? ಈಗಲಾದರೂ ಮೀರಿಹೋಗಿರುವುದು ಇಲ್ಲ. ಈಗಲಾದರೂ ಕರ್ಮೆಂದರೆ ಏನು, ಕರ್ಮವನ್ನು ಗ್ರಂಥ ರೂಪದಲ್ಲಿ ಬರೆಯುವವನ್ಯಾರೊ, ಮತ್ತೆ ಶಿಕ್ಷಿಸುವವನ್ಯಾರೊ ತಿಳಿದುಕೊ. ತಿಳಿದುಕೊಳ್ಳ ದೆಹೋದರೆ, ನರಕವೆಂದರೆ ಏನೊ? ಕರ್ಮವೆಂದರೆ ಏನೊ ಮುಂದೆ ನಿನಗೆ ತಿಳಿಯುತ್ತದೆ. ಜಾಗ್ರತೆ!

**21) ಪ್ರಶ್ನೆ :– ಒಬ್ಬನು ಒಂದು ತಪ್ಪು ಮಾಡಿದ್ದಾನೆಂದುಕೊಳ್ಳೋಣ. ಆಗ ಅವನಿಗೆ ಎಷ್ಟು ಪಾಪ ಬಂದಿರುವುದು ಅವನಿಗೆ ತಿಳಿಯುತ್ತದಾ?**

**ಉ ॥** ಮಾಡುವ ಕಾರ್ಯ ಕೆಟ್ಟದಾದರೂ, ಅಥವಾ ಒಳ್ಳೆಯದಾದರೂ ಅದು ಪ್ರತ್ಯಕ್ಷವಾಗಿ ನಡೆಯುತ್ತಿರುತ್ತದೆ. ಆದರೆ ಆ ಕಾರ್ಯದಲ್ಲಿ ಬರುವ ಫಲಿತ ಮರ್ಮವಾದುದು. ಅದು ಯಾರಿಗು ತಿಳಿಯದು. ಎಷ್ಟು ಪಾಪ ಬಂದಿರುವುದು ಅರ್ಥವಾಗುವುದಿಲ್ಲ. ಜ್ಞಾನದೃಷ್ಠಿ ಇರುವವರು ಒಂದು ಕೆಲಸಕ್ಕೆ ಇಷ್ಟು ಪಾಪ ಬರುತ್ತದೆಂದು ಅಳತೆ ಮಾಡಿ ಹೇಳಿದರೂ, ಆಗ ಆ ಮಾತು ಸತ್ಯವೇ ಆದರೂ, ನಂತರ ಆ ಮಾತು ಸತ್ಯವಲ್ಲ. ಒಂದುಸಲ ಒಂದು ಕೆಲಸದಲ್ಲಿನ ಪಾಪವನ್ನು

ಇಷ್ಟೇ ಬರುತ್ತದೆಂದು ಹೇಳಿದಾಗ, ಆ ಕೆಲಸ ಯಾವಾಗ ಮಾಡಿದರೂ ಅಷ್ಟೇ ಪಾಪ ಬರುತ್ತದಲ್ಲವೆಯೆಂದು ಕೆಲವರಂದುಕೊಳ್ಳಬಹುದಾಗಲಿ, ಅದೇ ಕೆಲಸವನ್ನು ಎರಡನೆಸಲ ಅದೇ ವ್ಯಕ್ತಿ ಮಾಡಿದರೂ, ಇಲ್ಲವೆ ಅದೇ ಕೆಲಸವನ್ನು ಬೇರೆ ಮನುಷ್ಯ ಮಾಡಿದರೂ ಮೊದಲು ಬಂದಷ್ಟು ಪಾಪವೇ ಬರುತ್ತದೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಹಾಗೆ ಏಕೆ ನಡೆಯುತ್ತಿದೆಯೆಂದರೆ! ಕಾರ್ಯವನ್ನು ಮಾಡಿದ ವ್ಯಕ್ತಿಗೆ ಆ ಸಮಯದಲ್ಲಿರುವ ಭಾವವನ್ನು ಅನುಸರಿಸಿ ಕರ್ಮ ಬರುತ್ತಿರುತ್ತದೆ. ಒಬ್ಬ ವ್ಯಕ್ತಿ ಒಂದು ಕೆಲಸವನ್ನು ಮಾಡಿದಾಗ ಬಂದ ಪಾಪ (ಕರ್ಮ) ನಂತರ ಅದೇ ಕೆಲಸವನ್ನು ಅದೇ ವ್ಯಕ್ತಿ ಮಾಡಿದರು ಎರಡನೆಬಾರಿ ಬಂದಿರುವ ಪಾಪ ಮೊದಲು ಬಂದಿರುವ ಪಾಪಕ್ಕಿಂತ ಹೆಚ್ಚಾಗಾಗಲಿ, ಕಡಿಮೆಯಾಗಾಗಲಿ ಇರುತ್ತದೆ. ಮೊದಲು ಮಾಡಿದಾಗ ಇರುವ ಭಾವವೇ, ಎರಡನೆಬಾರಿ ಮಾಡಿದಾಗ ಇಲ್ಲದ ಕಾರಣದಿಂದ, ಎರಡನೆಬಾರಿ ಮಾಡಿದ ಕಾರ್ಯ ಒಂದೇ ಆದರೂ ಬಂದಿರುವ ಕರ್ಮ ಹೆಚ್ಚುಕಡಿಮೆಯಾಗಿದೆ. ಆದ್ದರಿಂದ ಈ ಕಾರ್ಯ ಮಾಡಿದಾಗ ಇಷ್ಟು ಕರ್ಮ ಬರುತ್ತದೆಂದು ಹೇಳಲಾರೆವಾಗಲಿ, ಕಾರ್ಯ ಮಾಡಿದಾಗ ಇರುವ ಭಾವವನ್ನನುಸರಿಸಿ ಕರ್ಮ ಬರುತ್ತಿರುತ್ತದೆ.

ಉದಾಹರಣೆಗೆ ಮೂವರು ಕಳ್ಳರು ದರೋಡೆ ಮಾಡುವುದಕ್ಕೆ ಒಂದು ದಾರಿಯಲ್ಲಿ ಮರೆಯಲ್ಲಿ ಕಾದಿದ್ದಾರೆಂದುಕೊಳ್ಳೋಣ. ಅವರಿಗೆ ಹತ್ತು ದಿನಗಳಿಂದ ಆ ದಾರಿಯಲ್ಲಿ ಯಾರೂ ಬಾರದಕಾರಣ ಕಳ್ಳತನ ನಡೆಯಲಿಲ್ಲ. ಅವರಿಗೆ ಎಂತಹ ಒಡವೆ ಸಿಗಲಿಲ್ಲ. ಹತ್ತು ದಿನಗಳ ನಂತರ ಒಂದೇಬಾರಿ ಮೂವರು ದಾರಿಹೋಕರು ಆ ದಾರಿಯಲ್ಲಿ ಕಾಲ್ನಡಿಗೆಯಲ್ಲಿ ಪ್ರಯಾಣಿಸುತ್ತಾ ಬಂದಿದ್ದಾರೆ. ಬಂದಿರುವ ಮೂವರು ದಾರಿಹೋಕರಲ್ಲಿ ಒಬ್ಬೊಬ್ಬರ ಹತ್ತಿರ ಲಕ್ಷ ರೂಪಾಯಿಗಳು ಇವೆ. ಮೂವರ ಹತ್ತಿರ ಮೂರು ಲಕ್ಷಗಳಿವೆ. ಮೂವರು ದಾರಿಹೋಕರು ಮೂವರು ಕಳ್ಳರ ದೃಷ್ಟಿಯಲ್ಲಿ ಬಿದ್ದಿದ್ದಾರೆ. ಬರುತ್ತಿರುವ ದಾರಿಹೋಕರನ್ನು ಮರೆಯಿಂದ ಸಮೀಪಿಸಿದ ಕಳ್ಳರು, ಒಂದೇಬಾರಿ ದಾರಿಹೋಕರ ಮೇಲೆ ದಾಳಿಮಾಡಿದರು. ದಾರಿಹೋಕರು ಮೂವರು, ಕಳ್ಳರು ಮೂವರು

ಆಗಿರುವುದರಿಂದ ಸ್ವಲ್ಪಸಮಯ ಅವರಮಧ್ಯೆ ಹೊಡೆದಾಟ ನಡೆದಿದೆ. ಒಬ್ಬ ದಾರಿಹೋಕ ತನ್ನ ಹತ್ತಿರವಿರುವ ಕಟ್ಟಿಗೆಯಿಂದ ಬಲವಾಗಿ ವೀರಯ್ಯ ಎನ್ನುವ ಕಳ್ಳನನ್ನು ಹೊಡೆದನು. ಆಗ ವೀರಯ್ಯ ಎನ್ನುವ ಕಳ್ಳನಿಗೆ ವಿಪರೀತವಾದ ಕೋಪ ಬಂದು ತನ್ನ ಹತ್ತಿರವಿರುವ ಕತ್ತಿನಿಂದ ಇರಿದು ಕಟ್ಟಿಗೆಯಿಂದ ಹೊಡೆದ ದಾರಿಹೋಕನನ್ನು ಸಾಯಿಸಿದನು. ಎರಡನೆ ದಾರಿಹೋಕ ಜಾನ್ ಎನ್ನುವ ಕಳ್ಳನೊಂದಿಗೆ ಕಿತ್ತಾಡುತ್ತಿರುವಾಗ ಜಾನ್ ಗಟ್ಟಿಯಾಗಿ ತಳ್ಳುವುದರಿಂದ ಪಕ್ಕದಲ್ಲೆ ಇರುವ ಕಲ್ಲಿನ ಮೇಲೆ ಬಿದ್ದು ತಲೆಗೆ ಗಾಯವಾಗಿ ಎರಡನೆ ದಾರಿಹೋಕ ಮರಣಿಸುವುದು ನಡೆದಿದೆ. ಎರಡನೆ ಕಳ್ಳನಾದ ಜಾನ್ ಅನ್ನುವಾತನು ದಾರಿಹೋಕನನ್ನು ಸಾಯಿಸಬೇಕೆಂದುಕೊಳ್ಳಲಿಲ್ಲ. ಆದರೂ ಜಾನ್ ತಳ್ಳುವುದರಿಂದ ಕಲ್ಲಿನ ಮೇಲೆಬಿದ್ದು ಮರಣಿಸುವುದು ನಡೆದಿದೆ. ಮೂರನೆ ದಾರಿಹೋಕ ಮೊದಲು ಎದುರು ತಿರುಗಿದರೂ ತನ್ನಸಾಟಿ ಪ್ರಯಾಣಿಕರಿಬ್ಬರೂ ಮರಣಿಸುವುದರಿಂದ ಪೂರ್ತಿ ಭಯಪಟ್ಟು ತನ್ನ ಹತ್ತಿರವಿರುವ ಲಕ್ಷ ರೂಪಾಯಿಗಳನ್ನು ಭಾಷಾ ಎನ್ನುವ ಮೂರನೆ ಕಳ್ಳನಿಗೆ ಕೊಡುವುದು ನಡೆದಿದೆ. ಮೂರನೆ ದಾರಿಹೋಕ ಒಡೆದಾಡದಂತೆ ಸುಮ್ಮನಾಗಿ ಇರುವ ಹಣಕೊಟ್ಟರೂ, ಹಣವನ್ನು ತೆಗೆದುಕೊಂಡ ನಂತರ ಭಾಷಾ ಅನ್ನುವ ಕಳ್ಳ ಮೂರನೆ ದಾರಿಹೋಕನನ್ನು ಸಹಾ ಸಾಯಿಸಿದನು. ಕೊನೆಗೆ ಮೂವರು ದಾರಿಹೋಕರು ಕಳ್ಳರ ಕೈಯಲ್ಲಿ ಮರಣಿಸಿದರು. ಮೂವರು ಕಳ್ಳರು ಮೂವರು ಪ್ರಯಾಣಿಕರನ್ನು ಸಾಯಿಸಿದಂತಾ ಗಿದೆ. ಅದರಿಂದ ಮೂವರು ಕಳ್ಳರಿಗೆ ಸಮಾನವಾಗಿ ಒಬ್ಬೊಬ್ಬರಿಗು ಒಂದು ಲಕ್ಷ ರೂಪಾಯಿಗಳು ದೊರೆತಿವೆ. ಕಳ್ಳರು ಮೂವರಲ್ಲಿ ಒಬ್ಬನು ವೀರಯ್ಯ ಹಿಂದುವಾಗಿದ್ದು, ಎರಡನೆಯವನಾದ ಜಾನ್ ಕ್ರೈಸ್ತವನು, ಮೂರನೆಯವನಾದ ಭಾಷಾ ಮುಸ್ಲಿಮ್ ಮತಸ್ಥನು. ಮೂವರು ಮೂರು ಮತದವರಾದರು, ಮೂವರು ಸೇರಿ ಮಾಡಿದ ದರೋಡೆಯಲ್ಲಿ ಮೂವರು ಪ್ರಯಾಣಿಕರು ಮರಣಿಸುವುದು ನಡೆದಿದೆ. ಮೂವರಿಗು ಸಮಾನವಾಗಿ ಲಕ್ಷರೂಪಾಯಿಗಳ ಪ್ರಕಾರ ಆದಾಯ ಬಂದಿದೆ.

ಅವರಿಗೆ ಬಂದಿರುವ ಲಾಭ ಸಮಾನವೆ ಆದರೂ, ಅವರಿಗೆ ಬಂದಿರುವ ಹತ್ಯಾಪಾಪ ಮಾತ್ರ ಹೆಚ್ಚುಕಡಿಮೆಯಾಗಿದೆ. ಮೊದಲ ಕಳ್ಳನಾದ ವೀರಯ್ಯನಿಗೆ ಹೆಚ್ಚು ಪಾಪ ಬಂದಿದೆ, ಎರಡನೆಯವನಾದ ಜಾನ್‌ಗೆ ಉಳಿದ ಇಬ್ಬರಿಗಿಂತ ಕಡಿಮೆ ಪಾಪ ಬಂದಿದೆ. ಮೂರನೆ ಕಳ್ಳನಾದ ಭಾಷಾಗೆ ಮೊದಲ ಇಬ್ಬರಿಗಿಂತ ಹೆಚ್ಚು ಪಾಪ ಬಂದಿದೆ. ವಿವರವಾಗಿ ಹೇಳಬೇಕೆಂದರೆ ವೀರಯ್ಯನಿಗೆ ' 80 ಯೂನಿಟ್‌ಗಳ ಪಾಪಬಂದಾಗ, ಜಾನ್‌ಗೆ 40 ಯೂನಿಟ್‌ಗಳ ಪಾಪ ಬಂದಿದೆ. ಭಾಷಾಗೆ ಮಾತ್ರ 100 ಯೂನಿಟ್‌ಗಳ ಪಾಪ ಬಂದಿದೆ (ಅರ್ಥವಾಗುವುದಕ್ಕೆ ಪಾಪವನ್ನು ಯೂನಿಟ್‌ಗಳ ರೂಪದಲ್ಲಿ ಬರೆದಿದ್ದೇವಾಗಲಿ, ಆ ವಿಧವಾಗಿ ಲೆಕ್ಕಿಸುವುದಕ್ಕೆ ಸಾಧ್ಯವಾಗುವುದಿಲ್ಲ.) ಮೊದಲು ಕತ್ತಿನಿಂದ ಇರಿದು ದಾರಿಹೋಕ ನನ್ನು ಸಾಯಿಸಿದ ವೀರಯ್ಯನಿಗೆ ಶೇಕಡ 80 ರಷ್ಟು ಪಾಪ ಬಂದಿದೆ ಅಲ್ಲವೆ! ಹಾಗೆ ಏಕೆ ಶೇಕಡ 80 ರಷ್ಟು ಪಾಪ ಬಂದಿದೆಂದು ಯೋಚಿಸಿ ನೋಡಿದರೆ ಈ ವಿಧವಾಗಿ ತಿಳಿಯುತ್ತಿದೆ. ವೀರಯ್ಯ ಮೊದಲ ದಾರಿಹೋಕನನ್ನು ಸಾಯಿಸಬೇ ಕೆಂದುಕೊಳ್ಳಲಿಲ್ಲ. ಆದ್ದರಿಂದ ಆತನಹತ್ತಿರ ಜಗಳವಾಡಿ ಒದ್ದಾದರೂ ಹಣವನ್ನು ಕಿತ್ತುಕೊಳ್ಳಬೇಕೆಂದುಕೊಂಡನು. ಆದರೆ ದಾರಿಹೋಕ ಕಟ್ಟಿಗೆಯಿಂದ ಹೊಡೆದಾಗ, ಎರಡನೆಬಾರಿ ಸಹಾ ಒದೆಯದಂತೆ ಕತ್ತಿನಿಂದ ಇರಿಯಬೇ ಕೆಂದುಕೊಂಡು ಇರಿದಿದ್ದಾನಾಗಲಿ, ಆತನನ್ನು ಸಾಯಿಸಬೇಕೆಂದು ಇರಿಯಲಿಲ್ಲ. ಒಂದು ಕತ್ತಿಯಹೊಡತಕ್ಕೆ ದಾರಿಹೋಕ ಸತ್ತುಹೋಗುವುದು ವೀರಯ್ಯನಿಗೆ ಸ್ವಲ್ಪ ಆಶ್ಚರ್ಯ ವಾಗಿದೆ. ಆದರೆ ದಾರಿಹೋಕ ತನ್ನ ಕತ್ತಿಇರಿತದಿಂದ ಮರಣಿ ಸಿದ್ದಾನೆಂದು ವೀರಯ್ಯನಿಗೆ ಅರ್ಥವಾಗಿದೆ. ಕತ್ತಿನಿಂದ ಇರಿದಿರುವುದರಿಂದ ಮರಣಿಸುತ್ತಾನೆಂದು ತಿಳಿದು ತನ್ನ ರಕ್ಷಣೆಗೋಸ್ಕರ ಇರಿದಿರುವುದರಿಂದ ವೀರಯ್ಯನಿಗೆ ದಾರಿಹೋಕನನ್ನು ಸಾಯಿಸಿದ ಪಾಪ ಶೇಕಡ 80 ರಷ್ಟು ಬಂದಿದೆ. ಶೇಕಡ 20 ರಷ್ಟು ಕಡಿಮೆಯಾಗುವುದಕ್ಕೆ ಕಾರಣ ವೀರಯ್ಯನಿಗೆ ಮೊದಲಾಗಲಿ, ಕೊನೆಯಾಗಲಿ ದಾರಿಹೋಕನನ್ನು ಸಾಯಿಸಬೇಕೆಂಬ ಉದ್ದೇಶವಿಲ್ಲ. ಆದರೂ ನಡೆದ ಸಂಘಟನೆ ಯಲ್ಲಿ ಕತ್ತಿಯಿಂದ ಇರಿದಿರುವುದರಿಂದ ಮರಣಿಸುವ ಅವಕಾಶವಿದೆಯೆಂದು

ತಿಳಿದು ಇರಿದಿರುವುದರಿಂದ ಪಾಪ ಬಂದರೂ, ಆತನನ್ನು ಸಾಯಿಸಬೇಕೆಂಬ ಭಾವ ಇಲ್ಲ ಆದುದರಿಂದ ಶೇಕಡ 20 ರಷ್ಟು ಪಾಪ ಇಲ್ಲದಂತೆ ಹೋಗಿ ಶೇಕಡ 80 ರಷ್ಟು ಪಾಪ ಬಂದಿದೆ.

ಇನ್ನು ಜಾನ್ ಎನ್ನುವ ಕಳ್ಳ ಹೊಡೆದಾಟದಲ್ಲಿ ದಾರಿಹೋಕನನ್ನು ಜೋರಾಗಿ ತಳ್ಳಿದ್ದಾನಾಗಲಿ, ಆತನನ್ನು ಸಾಯಿಸಬೇಕೆಂಬ ಉದ್ದೇಶದಿಂದ ತಳ್ಳಲಿಲ್ಲ. ದಾರಿಹೋಕನನ್ನು ತಳ್ಳುವುದರಿಂದ ಆತನು ಕಲ್ಲಿನ ಮೇಲೆಬಿದ್ದು ಮರಣಿಸುತ್ತಾನೆಂದು ಸ್ವಲ್ಪವೂ ಅಂದುಕೊಳ್ಳಲಿಲ್ಲ. ತಿಳಿಯದೇ ನಡೆದ ಸಂಘಟನೆಯಲ್ಲಿ ಆತನ ಜವಾಬ್ಧಾರಿ ಭಾವ ಕೇವಲ 40 ರಷ್ಟು ಮಾತ್ರವೆ ಇದೆ. ಆದ್ದರಿಂದ 60 ರಷ್ಟು ಪಾಪ ಜಾನ್‌ಗೆ ಅಂಟಲಿಲ್ಲ. ನಂತರ ಮೂರನೆ ಕಳ್ಳನಾದ ಭಾಷಾ ವಿಷಯಕ್ಕೆ ಬಂದರೆ ದಾರಿಹೋಕ ತನ್ನಸಾಟಿ ಪ್ರಯಾಣಿಕರು ಮರಣಿಸಿರುವುದು ನೋಡಿ, ಹೊಡೆದಾಡಿದರೆ ತನಗು ಸಹಾ ಸಾವು ತಪ್ಪುವುದಿಲ್ಲವೆಂದು ತಿಳಿದು, ಭಾಷಾಗೆ ಶರಣಾಗಿ ತನ್ನ ಹತ್ತಿರವಿರುವ ಹಣವೆಲ್ಲವನ್ನು ಕೊಟ್ಟನು. ಆದರೆ ಉಳಿದ ದಾರಿಹೋಕನನ್ನು ಬಿಟ್ಟುಹಾಕಿದರೆ, ಆತನು ಹೋಗಿ ಉಳಿದ ಇಬ್ಬರನ್ನು ತಾವು ಸಾಯಿಸಿದಂತೆ ಪೋಲೀಸ್‌ರಿಗೆ ತಿಳಿಸುತ್ತಾನೆಂದು, ಆತನು ಇಬ್ಬರ ಸಾವುಗಳಿಗೆ ಸಾಕ್ಷಿಯಾಗಿದ್ದಾನೆಂದು, ಉಳಿದ ಒಬ್ಬ ದಾರಿಹೋಕನನ್ನು ಸಾಯಿಸಿದರೆ ತಮಗೆ ಕೇಸು ಇರುವುದಿಲ್ಲ, ಆ ವಿಷಯ ಹೊರಗೆ ಹೋಗುವುದಿಲ್ಲವೆಂದು ತಿಳಿದ ಭಾಷಾ ಮೂರನೆ ದಾರಿಹೋಕನನ್ನು ಉದ್ದೇಶಪೂರ್ವಕವಾಗಿ ಸಾಯಿಸುವುದು ನಡೆದಿದೆ. ಹಾಗೆ ಅದೇ ಕೆಲಸವಾಗಿ ಸಾಯಿಸಬೇಕೆಂಬ ಭಾವದಿಂದ ಸಾಯಿಸುವುದರಿಂದ ಭಾಷಾಗೆ ನೂರರಷ್ಟು ಪಾಪ ತಗುಲಿಕೊಂಡಿದೆ. ಇಲ್ಲಿ ಭಾವವನ್ನನುಸರಿಸಿ ಪಾಪ (ಕರ್ಮ) ಬಂದಿದೆಯೆಂದು, ಮಾಡಿದ ಕಾರ್ಯದಿಂದ ಪಾಪ ಬರಲಿಲ್ಲವೆಂದು ತಿಳಿಯುತ್ತಿದೆ. ಇದರಿಂದ ಕರ್ಮ ವಿಧಾನದಲ್ಲಿ ಒಂದು ಸೂತ್ರ ಏರ್ಪಡುತ್ತಿದೆ. ಅದೇನೆಂದರೆ! ಕಾರ್ಯದಿಂದ ಕರ್ಮ ಬರುವುದಿಲ್ಲವಾಗಲಿ, ಭಾವದಿಂದ ಪಾಪ (ಕರ್ಮ) ಬರುತ್ತಿದೆಯೆಂದು ತಿಳಿಯುತ್ತಿದೆ.

ಕಾರ್ಯ ಏನೂ ನಡೆಯದಿದ್ದರೂ, ಕೇವಲ ಭಾವದಿಂದಲೇ ಕರ್ಮ ಏರ್ಪಡುತ್ತಿದೆಯೆಂದು ಮತ್ತೊಂದು ಸಂಘಟನೆಯ ಮೂಲಕ ತಿಳಿಯುತ್ತಿದೆ. ಒಂದು ಊರಿನಲ್ಲಿ ವೇದವೇದಾಂಗಗಳನ್ನು ತಿಳಿದ ಸದ್‌ಬ್ರಾಹ್ಮಣನು ನಿತ್ಯ ವೇದಪಠನೆ ಮಾಡುತ್ತಾ, ತನ್ನ ಇಷ್ಟ ದೇವತಾಮೂರ್ತಿಯಾದ ಶಿವಲಿಂಗವನ್ನು ಪೂಜಿಸುತ್ತಾ, ತನ್ನ ಮನೆಮುಂದಿರುವ ಅರಳಿಮರವನ್ನು ನಿತ್ಯ ಆರಾಧಿಸುತ್ತಾ ಪ್ರದಕ್ಷಿಣೆಗಳು ಮಾಡುತ್ತಿರುತ್ತಾನೆ. ಮುಂಜಾನೆ ಎದ್ದಾಗಿನಿಂದ ಯಾವುದೋ ಒಂದು ದೈವಾರಾಧನೆ ಮಾಡುತ್ತಾ ಕಾಲ ಕಳೆಯುತ್ತಿದ್ದನು. ಆ ಬ್ರಾಹ್ಮಣನ ಮನೆಯಮುಂದೆಯೇ ಎದುರುಗಡೆ ಒಂದು ವೇಶ್ಯ ಮನೆ ಇತ್ತು. ಆ ವೇಶ್ಯೆ ಮನೆಗೆ ಒಬ್ಬರ ನಂತರ ಒಬ್ಬರು ದಿನಕ್ಕೆ ಮೂವರು ಅಥವಾ ನಾಲ್ವರು ವಿಟರು ಬಂದು ಹೋಗುತ್ತಿದ್ದರು. ಆ ವೇಶ್ಯೆ ಹೊಟ್ಟೆಗೋಸ್ಕರ, ತನ್ನ ಜೀವನವನ್ನು ಸಾಗಿಸುವುದಕ್ಕೋಸ್ಕರ, ಯಾವ ಮಾರ್ಗ ಇಲ್ಲದೆ ವೇಶ್ಯಾ ವೃತ್ತಿಯನ್ನು ಅವಲಂಭಿಸಿ ಜೀವಿಸುತ್ತಿದ್ದಳು. ಹಾಗೆ ಪ್ರತಿ ದಿನ ಮೂವರು ಅಥವಾ ನಾಲ್ವರು ವಿಟರಿಂದ ಕಾಲ ಕಳೆಯುವ ವೇಶ್ಯೆ ತಾನು ಮಾಡುತ್ತಿರುವುದು ಪಾಪದಕೆಲಸವೆಂದು, ತನ್ನ ಮನೆಮುಂದೆ ನಿವಾಸಿಸುತ್ತಿರುವ ಬ್ರಾಹ್ಮಣನು ನಿತ್ಯವು ಇಬ್ಬರು ಮೂವರು ದೇವತೆಗಳನ್ನು ಪೂಜಿಸುತ್ತಾ ಪುಣ್ಯಕಾರ್ಯ ಮಾಡುತ್ತಿದ್ದಾನೆಂದು ಅಂದು ಕೊಳ್ಳುತ್ತಿದ್ದಳು. ಯಾವಾಗಲೂ ಆರತಿ ಗಂಟೆ ಶಬ್ದ ಕೇಳಿಸಿದರೂ, ಆಕೆ ವಿಟನ ಪಕ್ಕದಲ್ಲಿದ್ದರು, ಬ್ರಾಹ್ಮಣನು ಮಾಡುವ ಪೂಜಾಕಾರ್ಯವನ್ನು ಜ್ಞಾಪಕ ಮಾಡಿಕೊಳ್ಳುತ್ತಿದ್ದಳು. ತಾನು ವಿಟನಜೊತೆ ಇದ್ದರೂ, ಆಕೆ ಧ್ಯಾಸವೆಲ್ಲವೂ ಬ್ರಾಹ್ಮಣನು ಮಾಡುವ ಆರಾಧನೆ ಕಾರ್ಯಗಳ ಮೇಲೆಯೇ ಇರುತ್ತಿತ್ತು. ಆ ವಿಧವಾಗಿ ಮಾಡುವ ಕಾರ್ಯ ಶೃಂಗಾರವಾದರೂ ಆಕೆ ಮನಸ್ಸು ಶೃಂಗಾರದ ಮೇಲೆ ಇಲ್ಲದಂತೆ ದೈವ ಚಿಂತೆಯಮೇಲೆ ಪೂಜೆಗಳ ಮೇಲೆ ಇರುತ್ತಿತ್ತು.

ವೇಶ್ಯೆ ಮನೆಗೆ ಎದುರುಗಡೆ ಇರುವ ಬ್ರಾಹ್ಮಣನು ತನ್ನ ಮನೆಗೆ ಮುಂಭಾಗದಲ್ಲಿರುವ ಅರಳಿಮರಕ್ಕೆ ಪ್ರದಕ್ಷಿಣೆಗಳು ಮಾಡುತ್ತಾ, ವೇಶ್ಯೆ ಮನೆಯಲ್ಲಿನ ವಿಟರನ್ನು ಗಮನಿಸುತ್ತಿದ್ದನು. ಒಂದುಕಡೆ ಪೂಜಾಕಾರ್ಯಗಳು ಮಾಡುತ್ತಿದ್ದರೂ,

ಆತನ ಮನಸ್ಸೆಲ್ಲಾ ವೇಶ್ಯೆಮೇಲೆ ವೇಶ್ಯೆ ಮನೆಗೆಬರುವ ವಿಟರಮೇಲೆ ಇರುತ್ತಿತ್ತು. ವೇಶ್ಯೆ ಮನೆಗೆ ವಿಟನು ಬಂದಿರುವುದು ನೋಡಿ ಆತನು ತಿರಿಗಿಹೋಗುವವರೆಗು ಅಲ್ಲಿ ನಡೆಯುವ ಕಾರ್ಯಗಳನ್ನು ಕುರಿತು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದನು. ಬ್ರಾಹ್ಮಣನ ಪೂಜೆ ಶಿವನದಾದರೂ, ಧ್ಯಾಸವೆಲ್ಲ ವೇಶ್ಯೆದಾಗಿತ್ತು. ಹೀಗೆ ಕೆಲವು ವರ್ಷಗಳು ಕಳೆದುಹೋಗಿವೆ. ಒಂದು ಬಾರಿ ಆ ಬ್ರಾಹ್ಮಣನು ಇರುವ ಊರಿನಲ್ಲಿ ಕಲರಾ ವ್ಯಾಧಿ ವ್ಯಾಪಿಸಿದೆ. ಆ ಊರಿನಲ್ಲಿ ಬಹಳಜನ ಮರಣಿಸಿದ್ದಾರೆ. ಒಂದು ದಿನ ಬ್ರಾಹ್ಮಣನಿರುವ ಬೀದಿಯೊಳಗೆ ಕಲರಾ ಪ್ರವೇಶಿಸಿದೆ. ಒಂದೇ ದಿನ ವೇಶ್ಯೆಗು, ಬ್ರಾಹ್ಮಣನಿಗು ಕಲರಾ ಸೋಕಿದೆ. ಕಲರಾ ತಗುಲಿದ ಮರುದಿನವೆ ಇಬ್ಬರೂ ಮರಣಿಸಿದ್ದಾರೆ. ವೇಶ್ಯೆ ಮತ್ತು ಬ್ರಾಹ್ಮಣನು ಒಂದೇಬಾರಿ ಎರಡು ಮೂರು ನಿಮಿಷಗಳ ವ್ಯತ್ಯಾಸದಿಂದ ಮರಣಿಸಿದ್ದಾರೆ. ಆಗ ವೇಶ್ಯ ಶರೀರದಲ್ಲಿರುವ ಜೀವಿಯನ್ನು ತೆಗೆದುಕೊಂಡು ಹೋಗುವುದಕ್ಕೆ, ಹಾಗೆ ಬ್ರಾಹ್ಮಣನ ಶರೀರದಲ್ಲಿರುವ ಜೀವಿಯನ್ನು ತೆಗೆದುಕೊಂಡು ಹೋಗುವುದಕ್ಕೆ ಒಂದುಕಡೆ ದೇವದೂತರು, ಮತ್ತೊಂದುಕಡೆ ಯಮದೂತರು ಬಂದಿದ್ದಾರೆ. ಆದರೆ ಯಮದೂತರು ಬ್ರಾಹ್ಮಣನ ಮನೆಗೆ, ದೇವದೂತರು ವೇಶ್ಯೆ ಮನೆಗೆ ಹೋಗಿದ್ದಾರೆ. ಆಗ ಬ್ರಾಹ್ಮಣನು ನೀವೇಕೆ ಬಂದಿದ್ದೀರೆಂದು ಯಮದೂತರನ್ನು ಪ್ರಶ್ನಿಸಿದ್ದಾನೆ. ಆ ಮಾತು ಕೇಳಿದ ಯಮದೂತರು ನಿನ್ನನ್ನು ಯಮಲೋಕಕ್ಕೆ ತೆಗೆದುಕೊಂಡುಹೋಗಿ ನರಕದಲ್ಲಿ ಹಾಕುತ್ತೇವೆಂದು ಹೇಳಿದ್ದಾರೆ.

ಆಗ ಎದುರುಗಡೆ ಇರುವ ವೇಶ್ಯ ಮನೆಗೆ ಬಂದಿರುವ ದೇವದೂತರನ್ನು ನೋಡಿ, ಅವರು ಏಕೆ ಬಂದಿದ್ದಾರೆಂದು ಯಮದೂತರನ್ನೆ ಕೇಳಿದನು. ಆಗ ಅವರು ಬ್ರಾಹ್ಮಣಜೊತೆ ಮಾತನಾಡುತ್ತಾ, ಅವರು ದೇವದೂತರು ಎದುರುಮನೆಯಲ್ಲಿ ಮರಣಿಸಿದ ಸ್ತ್ರೀಯನ್ನು (ಜೀವಿಯನ್ನು) ತೆಗೆದುಕೊಂಡು ಸ್ವರ್ಗಲೋಕಕ್ಕೆ ಹೋಗುತ್ತಾರೆಂದು ಹೇಳಿದ್ದಾರೆ. ಆಗ ಬ್ರಾಹ್ಮಣನು "ನನ್ನನ್ನು ಯಮಲೋಕಕ್ಕೆ, ಆ ವೇಶ್ಯೆಯನ್ನು ಸ್ವರ್ಗಲೋಕಕ್ಕಾ? ಆಕೆ ನಿತ್ಯ ಪಾಪಕಾರ್ಯಗಳು ಮಾಡುತ್ತಿದ್ದಾಳೆ. ನಾನು ನಿತ್ಯ ಪುಣ್ಯಕಾರ್ಯಗಳಾದ ಆರಾಧನೆಗಳು ಮಾಡಿದ್ದೇನೆ"

ಎಂದು ಹೇಳಿದನು. ಆಗ ಯಮದೂತರು ಹೀಗೆ ಹೇಳಿದರು. **ಮಾಡುವ ಕಾರ್ಯದಿಂದ ಪಾಪವಾಗಲಿ, ಪುಣ್ಯವಾಗಲಿ ಬರುವುದಿಲ್ಲ. ಮನುಷ್ಯನಲ್ಲಿರುವ ಭಾವದಿಂದಲೇ ಪಾಪಪುಣ್ಯಕರ್ಮಗಳು ಬರುತ್ತವೆ** ಎಂದು ಹೇಳಿದ್ದಾರೆ. ಬ್ರಾಹ್ಮಣನು ಆರಾಧನಾ ಕಾರ್ಯಗಳು ಮಾಡುತ್ತಿದ್ದರು ಮನಸ್ಸನ್ನು ವೇಶ್ಯ ಮನೆಯಲ್ಲಿ ಇಟ್ಟುಕೊಳ್ಳುವುದರಿಂದ ಆತನ ಧ್ಯಾಸದ ಪ್ರಕಾರ ಬ್ರಾಹ್ಮಣನಿಗೆ ಪಾಪ ಬಂದಂತೆ ಯಮದೂತರು ಹೇಳಿದ್ದಾರೆ. ಹಾಗೆಯೇ ವೇಶ್ಯಳು ವಿಟರ ಹತ್ತಿರವಿದ್ದು ಪಾಪ ಕೆಲಸಗಳು ಮಾಡಿದರೂ, ಆಕೆ ಧ್ಯಾಸವೆಲ್ಲವೂ ಬ್ರಾಹ್ಮಣನ ಮನೆಯಲ್ಲಿನ ಪೂಜೆಗಳ ಮೇಲೆ ಇರುವುದರಿಂದ ವೇಶ್ಯಗೆ ಪುಣ್ಯ ಬಂದಿದೆ. ಇದೇ ವಿಷಯವನ್ನೆ ದೇವದೂತರು ವೇಶ್ಯಳಿಗು ಹೇಳಿ ಆಕೆಯನ್ನು ಸ್ವರ್ಗಕ್ಕೆ ತೆಗೆದುಕೊಂಡು ಹೋದರು. ಈ ವಿಷಯ ಎಲ್ಲವನ್ನು ಗಮನಿಸಿದರೆ ಭಾವದಿಂದಲೇ ಕರ್ಮ ಏರ್ಪಡುತ್ತಿದೆಯಾಗಲಿ, ಕಾರ್ಯದಿಂದ ಅಲ್ಲವೆಂದು ತಿಳಿಯುತ್ತಿದೆ. (ಯಮದೂತರು, ದೇವದೂತರು ಎನ್ನುವ ಮಾತನ್ನು ಪಾಠಕರಿಗೆ ವಿಷಯ ಅರ್ಥವಾಗುವುದಕ್ಕೆ ಬರೆದಿದ್ದೇವೆ. ವಾಸ್ತವಕ್ಕೆ ಯಮದೂತರು, ದೇವದೂತರು ಅನ್ನುವವರು ಇಲ್ಲ. ಹಾಗೆ ಸ್ವರ್ಗ, ನರಕ ಎಲ್ಲಿಯೂ ಇಲ್ಲ ಎಂದು ತಿಳಿಯಬೇಕು.)

ಕರ್ಮ ಸೂತ್ರವನ್ನು ಗಮನಿಸಿದರೆ ಕರ್ಮ (ಪಾಪ+ಪುಣ್ಯ) ಅನ್ನುವುದು ಭಾವದಿಂದ ಏರ್ಪಡುತ್ತಿದೆಯಾಗಲಿ, ಕಾರ್ಯದಿಂದ ಏರ್ಪಡುತ್ತಿಲ್ಲವೆಂದು ತಿಳಿಯುತ್ತಿದೆ. ನಾವು ಹೇಳಿಕೊಳ್ಳುವುದೇ ಅಲ್ಲದೆ ಭಗವದ್ಗೀತೆಯಲ್ಲಿ ಮೋಕ್ಷ ಸನ್ಯಾಸಯೋಗವೆಂಬ ಅಧ್ಯಾಯದಲ್ಲಿ 17ನೇ ಶ್ಲೋಕದಲ್ಲಿ ಭಗವಂತನು ಹೀಗೆ ಹೇಳಿದ್ದಾನೆ.

***ಶ್ಲೋ ॥ ಯಸ್ಯ ನಾಹಂಕೃತ್ ಭಾವೊ ಬುದ್ಧಿರಸ್ಯ ನಲಿಪ್ಯತೇ।***
***ಹಾತ್ವಾಪಿ ನ ಇಮಾನ್ ಲೋಕಾನ್ನ ಹಂತಿ ನ ನಿಬಧ್ಯತೇ ॥***

**ಭಾವಾರ್ಥ :–** "ಯಾರ ಭಾವದಲ್ಲಿ ಅಹಂಕಾರ ಇಲ್ಲವೊ, ಫಲಿತದ ಮೇಲೆ ಯಾರಿಗೆ ಆಸೆ ಇಲ್ಲವೊ, ಅವನು ಲೋಕದಲ್ಲಿರುವವರನ್ನು ಹತ್ಯೆ ಮಾಡಿದರೂ,

ಆತನು ಹಂತಕನಲ್ಲ ಮತ್ತು ಆತನಿಗೆ ಪಾಪ ಅಂಟಿಕೊಳ್ಳುವುದಿಲ್ಲ." ಎಂದು ಹೇಳಿದ್ದಾನೆ. ಇಲ್ಲಿ ಹೇಳಿದಕಾರ್ಯ ಚಿಕ್ಕದಲ್ಲ. ಭೂಮಿಮೇಲಿರುವ ಮನುಷ್ಯರೆಲ್ಲ ರನ್ನು ಹತ್ಯೆಮಾಡಿದರೂ ಎಂದು ಹೇಳಲ್ಪ ಟ್ಟಿದೆ. ಎಲ್ಲರನ್ನು ಹತ್ಯೆ ಮಾಡುವುದು ಭಯಂಕರವಾದ ಪಾಪದಿಂದ ಕೂಡಿಕೊಂಡ ಕೆಲಸ ಎಂದು ಎಲ್ಲರಿಗು ತಿಳಿದಿದೆ. ಅಂತಹ ದೊಡ್ಡ ಪಾಪ ಬರುವ ಕೆಲಸದಲ್ಲಿ ಸಹಾ ಅಹಂಕಾರ ಇಲ್ಲದಿದ್ದರೆ, ಹತ್ಯೆ ಮಾಡಿದರೂ ಅವನು ಹಂತಕನಲ್ಲ, ಹತ್ಯಾಪಾಪ ಬರುವುದಿಲ್ಲ ಎಂದು ಶ್ರೀಕೃಷ್ಣನು ಹೇಳಿದ್ದಾನೆಂದರೆ ಮಾಡುವ ಕಾರ್ಯಕ್ಕೆ ಕರ್ಮ ಯಾವ ಸಂಬಂಧ ಇಲ್ಲವೆಂದು, ಶರೀರದಲ್ಲಿರುವ ಅಹಂಭಾವಕ್ಕೆ ಕರ್ಮ ಸಂಬಂಧ ಪಟ್ಟಿದೆಯೆಂದು ತಿಳಿಯುತ್ತಿದೆ.

ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳಿರುವುದೆ ಅಲ್ಲದೆ ಬೈಬಲ್‌ನಲ್ಲಿ ಏಸು ಇದೇ ವಿಷಯವನ್ನೇ ಮತ್ತೊಂದು ಕೋನದಲ್ಲಿ ಹೇಳುತ್ತಿದ್ದಾನೆ. ಏಸು ಹೇಳಿದಮಾತು, ಶ್ರೀಕೃಷ್ಣನು ಹೇಳಿದಮಾತು ಎರಡೂ ಒಂದೇ ಅರ್ಥವನ್ನು ತಿಳಿಸುತ್ತಿದ್ದರೂ, ಹೊರಗೆ ಬೇರೆ ಕಾಣಿಸಿದಂತಿದೆ. ಏಸು ಹೇಳಿದ ಮಾತಿನಲ್ಲಿ ಸಹಾ ಭಾವಕ್ಕೆ ಪೂರ್ತಿ ಪ್ರಾಧಾನ್ಯತೆ ಕೊಡುವಂತೆ ತಿಳಿಯುತ್ತಿದೆ. ಮತ್ತಯಿ ಸುವಾರ್ತೆ 5ನೇ ಅಧ್ಯಾಯ 28ನೇ ವಚನದಲ್ಲಿ ಹೀಗೆ ಇದೆ. "ಒಬ್ಬ ಸ್ತ್ರೀಯನ್ನು ಮೋಹ ದೃಷ್ಟಿಯಿಂದ ನೋಡುವ ಪ್ರತಿಯೊಬ್ಬನು, ಆಗಲೇ ತನ್ನ ಹೃದಯದಲ್ಲಿ ಆಕೆಯೊಂದಿಗೆ ವ್ಯಭಿಚಾರ ಮಾಡಿದವನಾಗುತ್ತಾನೆ" ಈ ವಾಕ್ಯದಲ್ಲಿ ಕಾರ್ಯ ಮಾಡದಿದ್ದರೂ ಭಾವದಲ್ಲಿ ಅಂದುಕೊಳ್ಳುವುದರಿಂದ ಆತನು ನಿಜವಾಗಲು ಮಾಡಿದಂತಾಗುತ್ತಿದೆ. ವ್ಯಭಿಚಾರದಪಾಪ ಅವನಿಗೆ ಅಂಟುಕೊಳ್ಳುತ್ತಿದೆ. ಅದೇ ಗೀತೆಯಲ್ಲಿ ಹೇಳಿದ ವಾಕ್ಯದಲ್ಲಿ ಕಾರ್ಯವನ್ನು ಮಾಡಿದರೂ ಭಾವ ಇಲ್ಲದಿರುವುದರಿಂದ, ಮಾಡದವನಂತೆ ಪರಿಗಣಿಸುತ್ತಾ ಪಾಪ ಅಲ್ಲವೆಂದು ಹೇಳಿದ್ದಾರೆ. ಗೀತೆಯಲ್ಲಿಯೂ, ಬೈಬಲ್‌ನಲಿಯ್ಲೂ ಇರುವ ವಾಕ್ಯಗಳ ಉದ್ದೇಶ ಒಂದೇ ಆದರೂ, ಗೀತೆಯಲ್ಲಿ ಕಾರ್ಯ ಮಾಡಿದರೂ ಎಂದು ಹೇಳಿದ್ದಾರೆ. ಬೈಬಲ್‌ನಲ್ಲಿ ಕಾರ್ಯ ಮಾಡದಿದ್ದರೂ ಎಂದು ಹೇಳಿದ್ದಾರೆ. ಹಾಗೆ ಗೀತೆಯಲ್ಲಿ

ಭಾವ ಇಲ್ಲದೆಹೋದರೆ ಎಂದು ಹೇಳಿದ್ದಾರೆ. ಬೈಬಲ್‌ನಲ್ಲಿ ಭಾವ ಇದ್ದರೆ ಎಂದು ಹೇಳಿದ್ದಾರೆ. ಹೇಳಿದ ವಾಕ್ಯಗಳು ಮುಂದಿನದು ಹಿಂದಕ್ಕೆ, ಹಿಂದಿನದು ಮುಂದಕ್ಕೆ ಹೇಳಿದ್ದಾರೆ ಹೊರತು ಎರಡರ ಅರ್ಥ ಒಂದೇಯೆಂದು ತಿಳಿಯುತ್ತಿದೆ. ಕರ್ಮ ಸೂತ್ರದ ಪ್ರಕಾರ ಕರ್ಮಬರುವುದಕ್ಕೆ ಕಾರ್ಯ ಮುಖ್ಯವಲ್ಲ, ಭಾವ ಮುಖ್ಯವೆಂದಿದ್ದಾರೆ. ಕಾರ್ಯದಿಂದ ಕರ್ಮಬರುತ್ತಿಲ್ಲ. ಭಾವದಿಂದ ಕರ್ಮ ಬರುತ್ತಿದೆ. ಎಲ್ಲಿಯಾದರಾಗಲಿ ಭಾವವನ್ನು ಕಾರ್ಯವನ್ನು ಬಿಡಿಸಿ ನೋಡಿ, ಭಾವವನ್ನು ಬಿಟ್ಟು ಕಾರ್ಯವನ್ನು ಮಾಡುವವನು ಕರ್ಮವನ್ನು ಜಯಿಸುತ್ತಾನೆ, ಕರ್ಮಯೋಗಿಯಾಗಿ ಬದಲಾಗುತ್ತಾನೆ.

ಮಾನವನು ಸಾಯುವುದಕ್ಕೆ ಹುಟ್ಟುವುದಕ್ಕೆ ಕರ್ಮವೇ ಕಾರಣವಾಗಿದೆ. ಮಾನವನು ಜನನ ಮರಣ ಚಕ್ರದಿಂದ ಹೊರಬೀಳುವುದಕ್ಕೆ ಕರ್ಮ ಅಡ್ಡವಾಗಿದೆ. ಕರ್ಮವನ್ನು ಇಲ್ಲದಂತೆ ಮಾಡಿಕೊಂಡರೆ ಹುಟ್ಟಬೇಕಾದ ಅವಶ್ಯಕತೆ ಇಲ್ಲ. ಕರ್ಮ ಇಲ್ಲದಂತೆ ಹೋದಾಗ ಮನುಷ್ಯ ದೈವಸಾನ್ನಿಧ್ಯವನ್ನು ಸೇರಿ ಮೋಕ್ಷವನ್ನು ಹೊಂದುತ್ತಾನೆ. ಆದ್ದರಿಂದ ಆಧ್ಯಾತ್ಮಿಕ ವಿದ್ಯೆಯಲ್ಲಿ ಕರ್ಮವನ್ನು ಜಯಿಸುವುದು ಮುಖ್ಯ ಘಟ್ಟವಾಗಿದೆ. ಕರ್ಮ ಹೇಗೆ ಅಂಟುತ್ತಿದೆಯೊ, ತಿಳಿದರೆ ಸುಲಭವಾಗಿ ಅದನ್ನು ಜಯಿಸಿ ಮುಕ್ತಿಯನ್ನು ಹೊಂದಬಹುದು. ಕರ್ಮ ಕೇವಲ ಭಾವದಿಂದಲೇ ಅಂಟುತ್ತಿದೆಯೆಂದು, ಕಾರ್ಯಗಳಿಂದ ಅಲ್ಲವೆಂದು ಅರ್ಥವಾಗುತ್ತಿದೆ. ಅಂತಹದರಲ್ಲಿ ಭಾವಗಳನ್ನು ಹೊಂದದೆಹೋದರೆ ಕರ್ಮಬರುವುದಿಲ್ಲ. ಕೇವಲ ಭಾವವನ್ನು ಇಲ್ಲದಂತೆ ಮಾಡಿಕೊಳ್ಳುವುದರಿಂದ ಕರ್ಮವನ್ನು ಸುಲಭವಾಗಿ ಜಯಿಸಬಹುದು. ಆದರೂ ಸೂತ್ರ ತಿಳಿಯದ ಮನುಷ್ಯರು ಪಕ್ಕದಾರಿ ಹಿಡಿದು, ಮೋಕ್ಷಕ್ಕೋಸ್ಕರ, ಪೂಜೆಗಳು, ಯಜ್ಞಗಳು, ವೇದಾಧ್ಯಯನಗಳು, ದಾನಗಳು, ತಪಸ್ಸುಗಳು ಮೊದಲಾದ ಕಾರ್ಯಗಳನ್ನು ಮಾಡುತ್ತಿದ್ದಾರೆ. ಕೆಲವರಾದರೆ ಮೆಡಿಟೇಷನ್ ಎಂದು ಧ್ಯಾನವನ್ನು ಮಾಡುತ್ತಿದ್ದಾರೆ. ಅನೇಕ ವಿಧಗಳ ಸಾಧನೆಗಳನ್ನು ಮಾಡುತ್ತಿದ್ದಾರೆ. ಆಧ್ಯಾತ್ಮಿಕ ವಿದ್ಯೆಯಲ್ಲಿ ದೊಡ್ಡವರೆಂದು ಪ್ರಚಾರವಾದವರು ಸಹಾ ಕೇವಲ ಭಾವದಿಂದ ಕರ್ಮವನ್ನು ಜಯಿಸಬಹುದೆಂದು

ತಿಳಿಯದೆ ತಲೆಗಳು ಬೋಳಿಸಿ ಕೆಲವರೂ, ತಲೆಗಳು ಬೆಳೆಸಿ ಕೆಲವರೂ, ಬಟ್ಟೆಗಳು ಬದಲಾಯಿಸಿ ಕೆಲವರೂ, ಬಟ್ಟೆಗಳು ಬಿಚ್ಚಿ ಕೆಲವರೂ, ಯಾತ್ರೆಗಳು ಮಾಡಿ ಕೆಲವರೂ, ಬೂದಿ ಬಳಿದುಕೊಂಡು ಕೆಲವರೂ, ಹೀಗೆ ಎಷ್ಟೋ ವಿಧಗಳ ತೊಂದರೆಗಳು ಬೀಳುತ್ತಿದ್ದಾರೆ. ಎಷ್ಟು ಮಾಡಿದರೂ ಅವುಗಳಿಂದ ಕರ್ಮಹೋಗಲಿಲ್ಲ. ದೇವರು ತಿಳಿಯುವುದಿಲ್ಲ. ಕರ್ಮರಾಹಿತ್ಯವಾದ ದಿನ ಜನ್ಮರಾಹಿತ್ಯವಾಗುತ್ತದೆ. ಕರ್ಮರಾಹಿತ್ಯಕ್ಕೆ ತಪಸ್ಸುಗಳು, ಯಜ್ಞಗಳು, ವೇದಾಧ್ಯಯನಗಳು ಕೆಲಸಕ್ಕೆ ಬರುವುದಿಲ್ಲ.

ಪ್ರತಿ ನಿತ್ಯ ಮನುಷ್ಯ ಭಾವದಿಂದ ಕೂಡಿದ ಕಾರ್ಯಗಳನ್ನು ಮಾಡುತ್ತಿದ್ದಾನೆ. ಆದ್ದರಿಂದ ಆ ಕಾರ್ಯಗಳ ಕರ್ಮಗಳು ಮನುಷ್ಯನನ್ನು ತಗುಲಿಕೊಳ್ಳುತ್ತಿವೆ. ಒಂದುವೇಳೆ ಈಗ ಜ್ಞಾನ ತಿಳಿದು ಕರ್ಮರಹಸ್ಯವನ್ನು ತಿಳಿದುಕೊಂಡರೆ, ಈ ದಿನದಿಂದ ಬರುವ ಕರ್ಮಗಳು ಬಾರದಂತೆ ಹೋಗುತ್ತವೆ. ಆದರೆ ಇದಕ್ಕು ಮೊದಲು ಸಂಪಾದಿಸಿಕೊಂಡ ಕರ್ಮಗಳನ್ನು ತಪ್ಪದೆ ಅನುಭವಿಸಬೇಕಾಗಿರುತ್ತದೆ.

**22) ಪ್ರಶ್ನೆ :– ಇದಕ್ಕು ಮೊದಲು ಮಾಡಿದ ಕಾರ್ಯಗಳಲ್ಲಿ ಲಿಖಿಸಲ್ಪಟ್ಟ ಕರ್ಮಗಳ ಗ್ರಂಥವಿರುವಾಗ, ಅದರಿಂದ ಅನುಭವಿಸದೆ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದಾ? ಈಗ ಬರುವ ಕರ್ಮವನ್ನು ಜಯಿಸುವ ಉಪಾಯ ಸುಲಭವಾದುದಾಗಿರುವಂತೆ, ಇರುವ ಕರ್ಮ ಅನುಭವಿಸದಂತಿರುವುದಕ್ಕೆ ಏನಾದರೂ ಉಪಾಯ ಇದೆಯಾ?**

**ಉ ॥** ಇರುವ ಕರ್ಮವನ್ನು ತೆಗೆದುಹಾಕಿ ಅನುಭವಿಸದಂತೆ ತಪ್ಪಿಸಿಕೊಳ್ಳುವುದಕ್ಕೆ ದೇವರು ಒಂದು ಉಪಾಯವನ್ನು ಹೇಳಿದ್ದಾನೆ. ಆ ವಿಧಾನ ಹೊರತು ಭೂಮಿಮೇಲೆ ಕರ್ಮವನ್ನು ತಪ್ಪಿಸುವ ಮಾರ್ಗ ಯಾವುದೂ ಇಲ್ಲ. ಆದ್ದರಿಂದ ಮಾಡಿಕೊಂಡ ಕರ್ಮವನ್ನು ತಪ್ಪದೆ ಅನುಭವಿಸಬೇಕಾಗಿದೆ. ಸಂಪೂರ್ಣ ದೈವಜ್ಞಾನವನ್ನು ತಿಳಿದವನು, ಕರ್ಮವನ್ನು ಜಯಿಸುವ ಉಪಾಯವನ್ನು ತಿಳಿದಿರುತ್ತಾನೆ. ಕರ್ಮವನ್ನು ಜಯಿಸಿ, ಅದರಿಂದ ಅನುಭವಿಸದೆ ತಪ್ಪಿಸಿ

ಕೊಳ್ಳುವುದಕ್ಕೆ, ದೇವರು ಗೀತೆಯಲ್ಲಿ ಒಂದು ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ. ಜ್ಞಾನಯೋಗದಲ್ಲಿ 37ನೇ ಶ್ಲೋಕದಲ್ಲಿ...

***ಶ್ಲೋ॥ ಯಥೈಧಾಂಸಿ ಸಮಿದ್ಧೋಗ್ನಿ ರ್ಭ ಸ್ಮಸಾತ್ಕುರು ತೇರ್ಜುನ।***
***ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥***

**ಭಾವಾರ್ಥ :–** "ಅಗ್ನಿಯಲ್ಲಿ ಕಟ್ಟಿಗೆಗಳು ಯಾವ ವಿಧವಾಗಿ ಸುಟ್ಟು ಬೂದಿಯಾಗಿ ಹೋಗುತ್ತವೊ, ಅದೇ ವಿಧದಲ್ಲಿ ಜ್ಞಾನ ಎನ್ನುವ ಅಗ್ನಿಯಲ್ಲಿ ಕರ್ಮಗಳೆಂಬ ಕಟ್ಟಿಗೆಗಳು ಸುಟ್ಟುಹೋಗುತ್ತವೆ" ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಆದ್ದರಿಂದ ಯಾರಾದರೆ ದೇವರ ಜ್ಞಾನವನ್ನು ತಿಳಿಯುತ್ತಾನೊ, ಅವನು ಇರುವ ಕರ್ಮವನ್ನು ಇಲ್ಲದಂತೆ ಮಾಡಿಕೊಂಡು, ಅನುಭವಿಸದಂತೆ ತಪ್ಪಿಸಿಕೊಳ್ಳುತ್ತಾನೆ. ದೇವರ ಜ್ಞಾನವನ್ನು ತಿಳಿದವನಿಗೆ ಜ್ಞಾನ ಅಗ್ನಿಯಂತೆ ಪ್ರಕಾಶಿಸಿ ಕರ್ಮಗಳನ್ನು ಸುಟ್ಟುಹಾಕುತ್ತದೆ. ಅಷ್ಟೇ ಹೊರತು ಬೇರೆ ಮಾರ್ಗ ಏನು ಇಲ್ಲ. ಯಾರಾದರೂ ಪಾಪವನ್ನು ಹೊಂದಿದ್ದರೆ, ಅವನಿಗೆ ಜ್ಞಾನ ಇಲ್ಲದಿದ್ದರೆ, ಆ ಕರ್ಮವನ್ನು ಅವನು ತಪ್ಪದೆ ಅನುಭವಿಸಬೇಕಾಗಿದ್ದೇ. ಇದೇ ವಿಷಯವನ್ನು ಖುರ್‌ಆನ್ ಗ್ರಂಥದಲ್ಲಿ 4ನೇ ಸೂರಾದಲ್ಲಿ 111ನೇ ವಾಕ್ಯದಲ್ಲಿ **"ಯಾರಾದರೂ ಪಾಪವನ್ನು ಮೂಟೆಕಟ್ಟಿಕೊಂಡಿದ್ದರೆ, ಆತನ ಮೂಟೆ ಆತನ ಮೇಲೆ ಬೀಳುತ್ತದೆ"** ಎಂದು ಇದೆ. ಈ ಮಾತಿನ ಪ್ರಕಾರ ಯಾರ ಕರ್ಮವನ್ನು ಅವನೇ ಅನುಭವಿಸಬೇಕೆಂದು ತಿಳಿಯುತ್ತಿದೆ. ಇರುವ ಕರ್ಮವನ್ನು ಜಯಿಸುವುದಕ್ಕೆ 4ನೇ ಸೂರಾದಲ್ಲಿ 106ನೇ ವಾಕ್ಯದಲ್ಲಿ "ಪಾಪಕ್ಷಮಾಪಣೆಗಾಗಿ ಅಲ್ಲಾಹ್‌ನನ್ನು ಬೇಡಿಕೊಳ್ಳುತ್ತಿರು. ನಿಶ್ಚಯವಾಗಿ ಅಲ್ಲಾಹ್ ಕ್ಷಮಾಸಾಗರನು, ಕೃಪಾಕರನು" ಪೂರ್ವದಲ್ಲಿ ಕರ್ಮ ಗ್ರಂಥದಲ್ಲಿ ಬರೆಯಲಾದ ಕರ್ಮಗಳನ್ನು ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ಮೊದಲು ದೇವರ ಜ್ಞಾನವನ್ನು ತಿಳಿದು ದೇವರನ್ನು ಬೇಡಿಕೊಂಡರೆ ಕರ್ಮಗಳು ಕ್ಷಮಿಸಲ್ಪಟ್ಟು ಕರ್ಮಚಕ್ರದಲ್ಲಿ ಇಲ್ಲದಂತೆ ಹೋಗುತ್ತವೆ. ದೇವರು ಎಲ್ಲವುದಕ್ಕು ಅಧಿಪತಿ, ಅಧಿಕಾರಿ ಆದ್ದರಿಂದ ಆತನು ಅಂದುಕೊಂಡರೆ ರೆಪ್ಪೆಪಾಟಿನಲ್ಲಿ (ಕ್ಷಣದಲ್ಲಿ) ಕರ್ಮವನ್ನು ಇಲ್ಲದಂತೆ ಮಾಡಬಲ್ಲನು.

ಒಂದುವೇಳೆ ಮನುಷ್ಯ ಸಂಪಾದಿಸಿಕೊಂಡಿರುವುದು ಪ್ರಪಂಚ ಸಂಬಂಧವಾದುದಾದರೆ ದೇವರ ಜ್ಞಾನದಿಂದ ಸುಟ್ಟುಹೋಗುತ್ತದೆ. ಹಾಗೆ ಅಲ್ಲದೆ ದೈವದೂಷಣೆಯಿಂದ ಬಂದಿರುವ ಪಾಪ ದೇವರ ಜ್ಞಾನದಿಂದ ಕ್ಷಮಿಸಲ್ಪಡುವು ದಿಲ್ಲ. ಇದೇ ವಿಷಯವನ್ನು ತಿಳಿಸುತ್ತಾ 4ನೇ ಸೂರಾದಲ್ಲಿ 107ನೇ ವಾಕ್ಯದಲ್ಲಿ **"ಆತ್ಮದ್ರೋಹಕ್ಕೆ ಉಡಿಗಟ್ಟುವವರ ಪಕ್ಷಕ್ಕೆ ನೀನು ವಾದಿಸಬೇಡ, ವಿಶ್ವಾಸ ಘಾತಕಕ್ಕೆ ಪಾಲ್ಗೊಂಡು ಪಾಪದ ಪಂಕ್ತಿಯಲ್ಲಿ ಕುಳಿತುಕೊಂಡವನನ್ನು ಅಲ್ಲಾಹ್ ಎಷ್ಟುಮಾತ್ರ ಕ್ಷಮಿಸುವುದಿಲ್ಲ"** ಎಂದು ಹೇಳುವುದರಿಂದ ದೇವರ ಬಗ್ಗೆ ಮಾಡಿರುವ ಪಾಪ ಕ್ಷಮಿಸಲ್ಪಡುವುದಿಲ್ಲವೆಂದು, ಸುಟ್ಟುಹೋಗುವುದಿಲ್ಲವೆಂದು ಅರ್ಥವಾಗುತ್ತಿದೆ. ಇದೇ ವಿಷಯವನ್ನೇ ಬೈಬಲ್ ಗ್ರಂಥದಲ್ಲಿ ಮತ್ತಯಿ ಸುವಾರ್ತೆ 12ನೇ ಅಧ್ಯಾಯದಲ್ಲಿ 32ನೇ ವಾಕ್ಯದಲ್ಲಿ **"ಮನುಷ್ಯ ಕುಮಾರನಿಗೆ ವಿರೋಧವಾಗಿ ಮಾತನಾಡುವವನಿಗೆ ಪಾಪಕ್ಷಮಾಪಣೆ ಇದೆಯಾಗಲಿ, ಪರಿಶುದ್ಧಾತ್ಮಕ್ಕೆ ವಿರುದ್ಧವಾಗಿ ಮಾತನಾಡುವವನಿಗೆ ಈ ಯುಗದಲ್ಲಿಯಾದರೂ, ಬರುವ ಯುಗದಲ್ಲಿಯಾದರೂ ಪಾಪಕ್ಷಮಾಪಣೆ ಇಲ್ಲ"** ಎಂದು ಹೇಳಲಾಗಿದೆ ಎಂದು ಹೇಳಿದ್ದಾರೆ. ಇದೆಲ್ಲವು ಗಮನಿಸಿದರೆ, ಪ್ರಪಂಚ ವಿಷಯಗಳು ಜ್ಞಾನದಿಂದ ಕ್ಷಮಿಸಲ್ಪಡುತ್ತವಾಗಲಿ, ದೇವರ ಬಗ್ಗೆ ಮಾಡಿದ ಪಾಪ ಕ್ಷಮಿಸಲ್ಪಡುವುದಿಲ್ಲವೆಂದು ತಿಳಿಯುತ್ತಿದೆ. ಕರ್ಮ ಎನ್ನುವುದು ಒಂದು ಗ್ರಂಥದಂತೆ ಬರೆಯಲಾಗಿದೆ. ಆ ಗ್ರಂಥದಲ್ಲಿ ಎಷ್ಟೋ ಪತ್ರಗಳು ಇವೆ, ಅವುಗಳನ್ನು ಎಣಿಕೆ ಮಾಡಿದರೆ 324 ಇವೆ, ಹಾಗೆಯೇ 36 ಪಾಠಗಳು ಇವೆ. ಅಷ್ಟೇ ಅಲ್ಲದೆ ಕರ್ಮಗ್ರಂಥ ಮೂರು ಅಧ್ಯಾಯಗಳಾಗಿದೆ. ಕರ್ಮಗ್ರಂಥದ ವಿವರವನ್ನು ತಿಳಿಯಲ್ಪಟ್ಟವನ್ಯಾರಾದರೂ ಕರ್ಮವನ್ನು ಜಯಿಸುತ್ತಾನೆ. ಕರ್ಮ ಮರ್ಮವಾದುದು ಮತ್ತು ಭಯಂಕರ ವಾದುದು. ಅಂತಹ ಕರ್ಮವನ್ನು ಕೇವಲ ಭಾವದಿಂದ ಸಂಪಾದಿಸಿ ಕೊಳ್ಳಬಹುದು, ಅಥವಾ ಇಲ್ಲದಂತೆ ಮಾಡಿಕೊಳ್ಳಬಹುದು. ಕರ್ಮವನ್ನು ಜಯಿಸಿಕೊಳ್ಳುವುದು ತಿಳಿದು ಕೊಂಡರೆ ಬಹಳ ಸುಲಭವಾಗಿ ಕರ್ಮವನ್ನು ಜಯಿಸಬಹುದು. ಕರ್ಮ ರಹಸ್ಯ ಅಷ್ಟೇ.

## ಮುಕ್ತಾಯ

ಸವಿವರವಾಗಿ ತಿಳಿಸಿದ್ದಾರೆ. ಈದಿನ ದಕ್ಷಿಣ ಭಾರತದೇಶಕ್ಕೆ ಪರಿಮಿತವಾದ ದ್ರಾವಿಡರ ಮೇಲೆ
ಆಕ್ರಮಿಸಿಕೊಂಡ ಆರ್ಯ ಜಾತಿ ಇಂದಿಗೂ ಆಧಿಪತ್ಯ ನಡೆಸುತ್ತಿರುವುದೆಂಬ ನಗ್ನ ಸತ್ಯ
ತಿಳಿಯಬಹುದು. ಮಾನವಾಕಾರದಲ್ಲಿರುವ ಭಾರತದೇಶದ ಚಿತ್ರ ಪಟ ಗ್ರಂಥದೊಳಗೆ,
ಪಾಠಕರನ್ನು ನಿಶ್ಚೇಷ್ಟರಾಗಿ ಮಾಡುವುದು.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧ**

ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರ ಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರ ಕೊಡುತ್ತಾ ಹೋಂಶಾಖೆ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

ಪ್ರಮುಖರ ಲೇಖ



# ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ"

ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

——ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 9611133635**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಐಕ್ಯೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

# ಸುವಾರ್ತ ಕ್ರೈಸ್ತವ ಸಂಘ




## ಸುವಾರ್ತ ಕ್ರೈಸ್ತವ ಸಂಘ (S.K.S)

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

(Regd.No.: 459/2011)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

*www. khudaislamicspiritualsociety.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




**ಪ್ರಬೋಧ ಸೇವಾ ಸಮಿತಿ (P.S.S.)**

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

*www. thraithashakam.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381

e-mail id : info@dravidashreshtisangham.org

***www.dravidashreshtisangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ




**ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ (R.B.D.B.S)**

**(Regd.No.: 309/2015)**

ತಾರ್ನಾಕ, ಹೈದರಾಬಾದ್, ತೆಲಂಗಾಣ–500007.

e-mail id : info@ravanabrahmadravidabrahmanasangham.org

*www.ravanabrahmadravidabrahmanasangham.org*

